ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

ಸರ್ವಮೂಲಗ್ರಂಥಗಳು

# ಶ್ರೀಮದ್ ಅಣುಭಾಷ್ಯ

ಪರಮಪೂಜ್ಯ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಕನ್ನಡಸಾರ ಸಹಿತ




ಅನುವಾದಕರು

ವಿದ್ವಾನ್ ಸಿ.ಹೆಚ್. ಬದರೀನಾಥಾಚಾರ್ಯ

ಪೂರ್ಣಪ್ರಜ್ಞ ವಿದ್ಯಾಪೀಠ



ಪ್ರಕಾಶನ

ಅಖಿಲ ಭಾರತ ಮಾಧ್ವಮಹಾಮಂಡಲ (ರಿ.) ಉಡುಪಿ

ಪೂರ್ಣಪ್ರಜ್ಞ ವಿದ್ಯಾಪೀಠ, ಕತ್ತರಿಗುಪ್ಪ ಮುಖ್ಯರಸ್ತೆ,

ಬೆಂಗಳೂರು – 560 028

II ಶ್ರೀಃ II

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಶ್ರೀ ಸರ್ವಮೂಲ ಗ್ರಂಥಗಳು

(ಕನ್ನಡ ಅನುವಾದ ವಿವರಣೆ ಸಹಿತ)

## ಸಂಪುಟ - ೨೪

# ಶ್ರೀ ಅಣುಭಾಷ್ಯ

ಪರಮಪೂಜ್ಯ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಕನ್ನಡಸಾರ ಸಹಿತ

ಅನುವಾದಕರು

ವಿದ್ವಾನ್ ಸಿ.ಹೆಚ್.ಬದರೀನಾಥಾಚಾರ್ಯ

ಪೂರ್ಣಪ್ರಜ್ಞವಿದ್ಯಾಪೀಠ

ಪ್ರಕಾಶಕರು

ಅಖಿಲ ಭಾರತ ಮಾಧ್ವ ಮಹಾ ಮಂಡಲ (ರಿ), ಉಡುಪಿ

ಪೂರ್ಣಪ್ರಜ್ಞ ವಿದ್ಯಾಪೀಠ

ಬೆಂಗಳೂರು - 560 028

ಸರ್ವಮೂಲ ಶ್ರೀಅಣು ಭಾಷ್ಯ ಕನ್ನಡ ಅನುವಾದ
ಅನುವಾದಕರು : ವಿದ್ವಾನ್ ಸಿ.ಹೆಚ್.ಬದರೀನಾಥಾಚಾರ್ಯ
ಪ್ರಕಾಶನ ಅಖಿಲ ಭಾರತ ಮಾಧ್ವ ಮಹಾ ಮಂಡಲ, ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು-560 028. ಈ ಗ್ರಂಥವು ತಮ್ಮ ಐತಿಹಾಸಿಕ ಪಂಚಮ ಪರ್ಯಾಯ ಶ್ರೀ ಕೃಷ್ಣಪೂಜಾ ಕೈಂಕರ್ಯವನ್ನು ಸ್ವೀಕರಿಸಿರುವ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಅಮೃತಹಸ್ತದಿಂದ ದಿನಾಂಕ 22.7.2017 ರಂದು (ಹೇಮಲಂಬಿ ನಾಮಸಂವತ್ಸರ ಆಷಾಢ ಬಹುಳ ತ್ರಯೋದಶಿ ಶನಿವಾರ) ಉಡುಪಿ ಶ್ರೀಕೃಷ್ಣ ಸನ್ನಿಧಾನದಲ್ಲಿ ಬಿಡುಗಡೆಗೊಂಡಿದೆ.

ಈ ಕೃತಿಯನ್ನು ಭಾವೀ ಪರ್ಯಾಯ ಪೀಠವನ್ನು ಸ್ವೀಕರಿಸಲಿರುವ ಪಲಿಮಾರು ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಲೋಕಾರ್ಪಣೆಗೊಳಿಸಿರುತ್ತಾರೆ.

ಪುಟಗಳು : 170
ಪ್ರಥಮ ಮುದ್ರಣ : 2017

ಪ್ರತಿ ಬೆಲೆ : ರೂ.250

ಪ್ರತಿಗಳು : 1000




ಗ್ರಂಥಗಳು ದೊರೆಯುವ ಸ್ಥಳ

ಅಖಿಲ ಭಾರತ ಮಾಧ್ವ ಮಹಾ ಮಂಡಲದ ಕಾರ್ಯಾಲಯ

ಪೂರ್ಣಪ್ರಜ್ಞ ವಿದ್ಯಾಪೀಠ , ಪೂರ್ಣಪ್ರಜ್ಞ ನಗರ , ಬೆಂಗಳೂರು –28

ಅಕ್ಷರ ಜೋಡಣೆ : ವಿದ್ವಾನ್ ಮಾತರಿಶ್ವ ಆಚಾರ್ ಹಾಗೂ ಆರ್.ಎಸ್.ಪ್ರೇಮ್‌ಕುಮಾರ್

ಮುದ್ರಣ : ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್ , ನ್ಯೂ ತರಗು ಪೇಟೆ, ಬೆಂಗಳೂರು.

# ಶ್ರೀ 108 ಶ್ರೀ ಪೇಜಾವರ ಮಠಾಧೀಶರಾದ
# ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಸಂದೇಶ

ಶ್ರೀ ಮಧ್ವಾಚಾರ್ಯರ 750ನೇ ವರ್ಷದ ಜಯಂತಿಯ ಸಂದರ್ಭದಲ್ಲಿ ಕೈಗೊಂಡಿರುವ ಜ್ಞಾನಪ್ರಸಾರ ಯೋಜನೆಯ ಅಂಗವಾಗಿ ಶ್ರೀಮದಾಚಾರ್ಯರ ಎಲ್ಲಾ ಗ್ರಂಥಗಳ ಕನ್ನಡ ಅನುವಾದವನ್ನು ಪ್ರಕಾಶಿಸುವ ಬೃಹತ್ ಯೋಜನೆಯನ್ನು ಆನಂದತೀರ್ಥ ಪ್ರತಿಷ್ಠಾನದ ಸಹಕಾರದಿಂದ ಅಖಿಲ ಭಾರತ ಮಾಧ್ವ ಮಹಾಮಂಡಲವು ಕೈಗೊಂಡಿದೆ. ತೆಲುಗು, ತಮಿಳು ಮುಂತಾದ ಪ್ರಾದೇಶಿಕ ಭಾಷೆಗಳಲ್ಲಿಯೂ, ಹಿಂದಿ, ಇಂಗ್ಲೀಷ್ ಭಾಷೆಗಳಲ್ಲಿಯೂ ಅನುವಾದವನ್ನು ಪ್ರಕಟಿಸುವ ಬಯಕೆ ನಮ್ಮದಾಗಿದೆ. ಜಗತ್ತಿನ ಸತ್ಯತತ್ವಗಳನ್ನು ಅನುಭವದ ನೆಲೆಯಲ್ಲಿ ಪರೀಕ್ಷಿಸಿ ಸರಿಯಾದ ಪ್ರಮಾಣಗಳ ಆಧಾರದಲ್ಲಿ ವೈಜ್ಞಾನಿಕವಾಗಿ ವಿವೇಚಿಸುವ ವಿಶಿಷ್ಟತೆಯನ್ನು ಶ್ರೀಮದಾಚಾರ್ಯರ ಸಿದ್ಧಾಂತದಲ್ಲಿ ನಾವು ಕಾಣಬಹುದು. ಎಲ್ಲಾ ಪ್ರಮಾಣ, ತರ್ಕ, ಊಹಾಪೋಹಗಳಿಗಿಂತಲೂ ಅನುಭವಕ್ಕೆ ಹೆಚ್ಚಿನ ಸ್ಥಾನವನ್ನು ಶ್ರೀಮದಾಚಾರ್ಯರು ನೀಡಿದ್ದಾರೆ. ಎಲ್ಲಾ ಭಾಷೆಗಳಲ್ಲಿ ಆಚಾರ್ಯರ ಗ್ರಂಥಗಳ ಅನುವಾದದ ಪ್ರಕಟಣೆಯು, ಜಗತ್ತಿನ ಜಿಜ್ಞಾಸುಗಳಿಗೆ ಈ ಸತ್ಯದ ಅರಿವುಂಟಾಗಲು ಅನುಕೂಲವಾಗುವುದು. ಶ್ರೀಮದಾಚಾರ್ಯರ ಸಂದೇಶವು ವಿಶ್ವದಲ್ಲಿ ಪ್ರತಿಧ್ವನಿತವಾಗಲಿ, ಈ ಗ್ರಂಥ ಪ್ರಕಾಶನದಿಂದಾಗಿ ಜ್ಞಾನ, ಭಕ್ತಿ, ಕರ್ತವ್ಯ, ಚಾರಿತ್ರ್ಯಗಳ ಬಗ್ಗೆ ಜನಜಾಗೃತಿಯುಂಟಾಗಲಿ ಎಂದು ಹಾರೈಸುತ್ತೇವೆ. ಭಕ್ತರೂ, ಅಭಿಮಾನಿಗಳೂ, ಜಿಜ್ಞಾಸುಗಳೂ ಆದ ಎಲ್ಲಾ ಮಹಾಜನರ ಸಹಕಾರದಿಂದ, ಶ್ರೀಹರಿವಾಯುಗುರುಗಳ ಅನುಗ್ರಹದಿಂದ ಈ ಪವಿತ್ರವಾದ ಮಹತ್ತರವಾದ ಜ್ಞಾನಕಾರ್ಯವು ಯಶಸ್ವಿಯಾಗಲಿ ಎಂದು ಆಶಿಸುತ್ತೇವೆ.

ಶ್ರೀ ಶ್ರೀವಿಶ್ವೇಶತೀರ್ಥ ಶ್ರೀಪಾದರು

ದಿನಾಂಕ 22.07.2017 ಪರ್ಯಾಯ ಶ್ರೀ ಪೇಜಾವರ ಮಠ, ಉಡುಪಿ.

# ಸಂಪಾದಕ ಮಂಡಳಿಯ ನಿವೇದನೆ

ಅಣುಭಾಷ್ಯದ ಕನ್ನಡಾನುವಾದವನ್ನು ಮಾನ್ಯ ವಾಚಕರ ಮುಂದೆ ಪ್ರಸ್ತುತಪಡಿಸುತ್ತಿದ್ದೇವೆ. ಇಲ್ಲಿಗೆ ಸರ್ವಮೂಲಗಳಲ್ಲಿ ಮೂವತ್ತೈದು ಗ್ರಂಥಗಳ ಅನುವಾದ ಪೂರ್ಣಗೊಂಡಿದೆ.

ಶ್ರೀಮನ್ಮಧ್ವಾಚಾರ್ಯರ 750ನೇ ಜಯಂತಿಯ ಅಂಗವಾಗಿ 1986ರಲ್ಲಿ ಪರಮಪೂಜ್ಯ ಶ್ರೀವಿಶ್ವೇಶತೀರ್ಥ ಶ್ರೀಪಾದರು ಸಂಕಲ್ಪಿಸಿ ಆದೇಶಿಸಿದ ಸರ್ವಮೂಲಾನುವಾದಕಾರ್ಯದಲ್ಲಿ ಇನ್ನೆರಡು ಗ್ರಂಥಗಳು ಮಾತ್ರ ಉಳಿದಿವೆ. ಅನುವ್ಯಾಖ್ಯಾನ ಹಾಗೂ ನ್ಯಾಯವಿವರಣ. ಅದರಲ್ಲೂ ಅನುವ್ಯಾಖ್ಯಾನದಲ್ಲಿ ಒಂದು ಅಧ್ಯಾಯದ ಅನುವಾದವು ಈಗಾಗಲೇ ಪ್ರಕಟಗೊಂಡಿದ್ದು ಉಳಿದ ಭಾಗಗಳ ಅನುವಾದವೂ ತ್ವರಿತಗತಿಯಲ್ಲಿ ನಡೆಯುತ್ತಿದೆ. ಪೂಜ್ಯಶ್ರೀಪಾದರ ಪಂಚಮಪರ್ಯಾಯವು ಪೂರ್ತಿಗೊಳ್ಳುವುದರ ಒಳಗಾಗಿ ಶ್ರೀಮಧ್ವವಲ್ಲಭ ಶ್ರೀಕೃಷ್ಣನ ಸನ್ನಿಧಿಯಲ್ಲಿ ಸರ್ವಮೂಲಾನುವಾದದ ಪರಮಮಂಗಲಮಯ ಮಂಗಲವನ್ನು ನಡೆಸುವ ಸಂಕಲ್ಪವನ್ನು ಭಗವಂತ ಈಡೇರಿಸಬೇಕಾಗಿದೆ.

ಇದು ಸರ್ವಮೂಲಾನುವಾದದ ಇಪ್ಪತ್ತನಾಲ್ಕನೆಯ ಸಂಪುಟ. ಇಲ್ಲಿ ಶ್ರೀಮದಣುಭಾಷ್ಯದ ಸಂಕ್ಷಿಪ್ತ ಅನುವಾದವಿದೆ. ಪೂರ್ಣಪ್ರಜ್ಞವಿದ್ಯಾಪೀಠದ ಅಧ್ಯಾಪನದಲ್ಲಿ ಸಂಪೂರ್ಣವಾಗಿ ತನ್ನನ್ನು ತೊಡಗಿಸಿಕೊಂಡ ವಿದ್ವಾಂಸರಾದ ಸಿ.ಹೆಚ್.ಬದರೀನಾಥಾಚಾರ್ಯರು ಈ ಅನುವಾದವನ್ನು ರಚಿಸಿಕೊಟ್ಟಿದ್ದಾರೆ. ಅನುವಾದಕರಿಗೆ ಅಭಿನಂದನೆಗಳು.

ಪರ್ಯಾಯದ ಶ್ರೀಕೃಷ್ಣಪೂಜೆ ಹಾಗೂ ಆಡಳಿತದ ಬಿಡುವಿಲ್ಲದ ಕಾರ್ಯಕ್ರಮದ

ಮಧ್ಯೆ ಪೇಜಾವರಮಠಾಧೀಶರಾದ ಪರಮಪೂಜ್ಯ ಶ್ರೀವಿಶ್ವೇಶತೀರ್ಥ ಶ್ರೀಪಾದರು ಅಣುಭಾಷ್ಯದ ಗ್ರಂಥಸಾರವನ್ನು ಸರಳ ಸುಂದರವಾಗಿ ಅನುಗ್ರಹಿಸಿದ್ದಾರೆ. ಪೂಜ್ಯರಿಗೆ ಸಾಷ್ಟಾಂಗ ಪ್ರಣಾಮಗಳು.

ಆಂಗ್ಲ ಭಾಷೆಯಲ್ಲಿ ಈ ಗ್ರಂಥದ ಪರಿಚಯವನ್ನು ನೀಡಿರುವ ಪ್ರೊ. ಕೆ.ಟಿ. ಪಾಂಡುರಂಗಿಯವರನ್ನು ಇಲ್ಲಿ ಸ್ಮರಿಸುವುದು ನಮ್ಮ ಕರ್ತವ್ಯ.

ಈ ಸಂಪುಟದ ಅಕ್ಷರ ಜೋಡಣೆಯನ್ನು ವಿದ್ವಾನ್ ಶ್ರೀ ಮಾತರಿಶ್ವಾಚಾರ್ಯರು ಹಾಗೂ ಶ್ರೀ ಆರ್.ಎಸ್.ಪ್ರೇಮಕುಮಾರ್ ಅವರು ಅಂದವಾಗಿ ಮಾಡಿಕೊಟ್ಟಿದ್ದಾರೆ. ಇವರಿಗೆ ನಮ್ಮ ಅಭಿನಂದನೆಗಳು. ಸಂಪುಟದ ಮುದ್ರಣವನ್ನು ಸಕಾಲಕ್ಕೆ ಮುದ್ರಿಸಿಕೊಟ್ಟ ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್ ಅವರಿಗೆ, ಮುಖಪುಟ ವಿನ್ಯಾಸ ಹಾಗೂ ಸಂಪುಟದ ಬಿಡುಗಡೆ ಹಾಗೂ ಇತರೆ ಕಾರ್ಯಗಳಿಗೆ ವಿವಿಧ ಹಂತದಲ್ಲಿ ಶ್ರಮಿಸಿದ ಮಂಡಳದ ಪ್ರಧಾನ ಕಾರ್ಯದರ್ಶಿಗಳಾದ ಹೆಚ್.ಎನ್. ನಾರಾಯಣರಾವ್ ಹಾಗೂ ಮಂಡಳದ ಇತರೆ ಸಿಬ್ಬಂದಿ ವರ್ಗದವರಿಗೂ ಅಭಿನಂದನೆಗಳು.

**22.7.2017** **ಸಂಪಾದಕ ಮಂಡಳಿ**

# ಪ್ರಕಾಶಕರ ನುಡಿ

''ಗುಣಪೂರ್ಣನೂ, ನಿರ್ದೋಷನೂ ಆದ ನಾರಾಯಣನನ್ನು ತಿಳಿದು ಸೇರಬೇಕು'' ಎಂಬ ಆದೇಶವನ್ನು ಬ್ರಹ್ಮಸೂತ್ರಗಳು ನೀಡುತ್ತಿವೆ. ನಾಲ್ಕು ಅಧ್ಯಾಯದಲ್ಲಿರುವ 564 ಸೂತ್ರಗಳು ವೇದೋಪನಿಷತ್ತುಗಳೆಂಬ ಮಹಾಪ್ರವಾಹಕ್ಕೆ ಕಟ್ಟಿದ ದಂಡೆಗಳಂತಿದ್ದು ಇವು ವೇದಗಳೆಂಬ ಗಂಗಾಪ್ರವಾಹವನ್ನು ನಾರಾಯಣನೆಂಬ ಗುಣಸಾಗರದಲ್ಲಿ ಸೇರಿಸಿವೆ.

ಸೂತ್ರಗಳು ವೇದಾರ್ಥಗಳ ನಿರ್ಣಯಕ್ಕಾಗಿ ಹೊರಟಿವೆ. ನಿರ್ಣಯಗ್ರಂಥವಾದ ಸೂತ್ರವನ್ನೇ ತಪ್ಪಾಗಿ ಅರ್ಥೈಸಿಕೊಂಡರೆ ಸಮಸ್ತ ಶಾಸ್ತ್ರಾರ್ಥವೇ ಕೆಟ್ಟು ಹೋಗುತ್ತದೆ. ಹಾಗಾಗಿ ಸೂತ್ರಾರ್ಥದ ನಿರ್ಣಯದಲ್ಲಿ ಬಹಳ ಎಚ್ಚರಬೇಕು. ಅದಕ್ಕಾಗಿಯೇ ಶ್ರೀಮಧ್ವಾಚಾರ್ಯರು ಬ್ರಹ್ಮಸೂತ್ರಗಳ ಬಗೆಗೆ ನಾಲ್ಕು ಗ್ರಂಥಗಳನ್ನು ರಚಿಸಿಕೊಟ್ಟಿದ್ದಾರೆ. ಮೊದಲು ಭಾಷ್ಯವನ್ನು ರಚಿಸಿದರು. ನ್ಯಾಯವಿವರಣೆಯನ್ನು ಪೋಣಿಸಿದರು. ಸಕಲದರ್ಶನಗಳ ವಿಮರ್ಶೆಯನ್ನೊಳಗೊಂಡ ಅನುವ್ಯಾಖ್ಯಾನದಲ್ಲಿ ಸಮಸ್ತಶಾಸ್ತ್ರಾರ್ಥಸಾರವನ್ನು ಯುಕ್ತಿಯುಕ್ತವಾಗಿ ವಿವರಿಸಿದರು. ಇಷ್ಟಾಗಿಯೂ ಸೂತ್ರಗಳ ಅರ್ಥಸಂಗ್ರಹವನ್ನು ಬರಿಯ ಮೂವತ್ತೆರಡು ಶ್ಲೋಕಗಳಲ್ಲಿ ತುಂಬಿಸಿ ನಿತ್ಯಪಾರಾಯಣಕ್ಕೂ ಅನುಸಂಧಾನಕ್ಕೂ ಅನುಕೂಲ ಮಾಡಿಕೊಟ್ಟರು. ಈ ಪುಟ್ಟ ಸಂಗ್ರಹವೇ ಅಣುಭಾಷ್ಯ .

ಈ ಅಣುಭಾಷ್ಯಸಂಗ್ರಹದಲ್ಲಿ ಅನಂತ ಅರ್ಥಗಳು ಪ್ರಕಟವಾಗಿವೆಯಂತೆ. 'ಅನಂತೋऽರ್ಥಃ ಪ್ರಕಟಿತಃ ತ್ವಯಾಣೌ ಭಾಷ್ಯಸಂಗ್ರಹೇ' (ಸುಮಧ್ವವಿಜಯ) ಶ್ರೀರಾಯರಂಥ ಮಹಾಪುರುಷರು ಅಣುಭಾಷ್ಯದ ಅರ್ಥಗಳನ್ನು ತೆಗೆದು ತೋರಿಸಿದ್ದಾರೆ. ಅವನ್ನೆಲ್ಲಾ ಕನ್ನಡದಲ್ಲಿ ಅನುವಾದಿಸಿದರೆ ಅಗ್ರಮಾನ್ಯ ಜಿಜ್ಞಾಸುಗಳಿಗೆ ಗ್ರಹಣಕ್ಲೇಶವುಂಟಾದೀತೆಂಬ ಕಾರಣದಿಂದ ಮೂಲದ ಗ್ರಹಣಕ್ಕೆ ಬೇಕಾದಷ್ಟೇ ವಿವರಣೆಯನ್ನು ಈ ಗ್ರಂಥದಲ್ಲಿ ನೀಡಲಾಗುತ್ತಿದೆ.

ಎಲ್ಲಾ ಅಧಿಕರಣಗಳ ಸಿದ್ಧಾಂತಾರ್ಥದ ಸಂಗ್ರಹ ಅಣುಭಾಷ್ಯದಲ್ಲಿದೆ. ಆಯಾ ಅಧಿಕರಣದಲ್ಲಿರುವ ಬೇರೆಬೇರೆ ಸೂತ್ರಗಳ ಅರ್ಥವನ್ನು ಇಲ್ಲಿ ಸಾಮಾನ್ಯವಾಗಿ ನಾವು ಕಾಣಲಾರೆವು. ಹಾಗಾಗಿ ಈ ಅನುವಾದದಲ್ಲಿ ಆಯಾ ಅಧಿಕರಣದ ಮುಖ್ಯ ಸೂತ್ರವನ್ನಷ್ಟೇ ಉಲ್ಲೇಖಿಸಲಾಗಿದೆ. ಎಲ್ಲಾ ಸೂತ್ರಗಳಿಗೂ ವಿವರಣೆಯನ್ನು ನೀಡಿಲ್ಲ. ಎಲ್ಲಾ ಸೂತ್ರಗಳ ಅರ್ಥವಿವರಣೆಗಾಗಿ ಬ್ರಹ್ಮಸೂತ್ರಭಾಷ್ಯದ ಅನುವಾದವನ್ನು ಗಮನಿಸಬೇಕು.

ಈ ಗ್ರಂಥಕ್ಕೆ ಅನುಗ್ರಹ ಸಂದೇಶವನ್ನು ಅನುಗ್ರಹಿಸಿದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಗೆ ಪ್ರಣಾಮ ಪೂರ್ವಕ ನಮಸ್ಕಾರಗಳು.

ಇದು ಸರ್ವಮೂಲಾನುವಾದದ ಇಪ್ಪತ್ತನಾಲ್ಕನೆಯ ಸಂಪುಟ. ಇಲ್ಲಿ ಶ್ರೀಮದಣುಭಾಷ್ಯದ ಸಂಕ್ಷಿಪ್ತ ಅನುವಾದವಿದೆ. ಪೂರ್ಣಪ್ರಜ್ಞವಿದ್ಯಾಪೀಠದ ಅಧ್ಯಾಪನದಲ್ಲಿ ಸಂಪೂರ್ಣವಾಗಿ ತನ್ನನ್ನು ತೊಡಗಿಸಿಕೊಂಡ ವಿದ್ವಾಂಸರಾದ ಸಿ.ಹೆಚ್.ಬದರೀನಾಥಾಚಾರ್ಯರು ಈ ಅನುವಾದವನ್ನು ರಚಿಸಿಕೊಟ್ಟಿದ್ದಾರೆ. ಅನುವಾದಕರಿಗೆ ಅಭಿನಂದನೆಗಳು.

ಆಂಗ್ಲ ಭಾಷೆಯಲ್ಲಿ ಈ ಗ್ರಂಥದ ಪರಿಚಯವನ್ನು ನೀಡಿರುವ ಪ್ರೊ. ಕೆ.ಟಿ. ಪಾಂಡುರಂಗಿಯವರನ್ನು ಇಲ್ಲಿ ಸ್ಮರಿಸುವುದು ನಮ್ಮ ಕರ್ತವ್ಯ.

ಈ ಸಂಪುಟದ ಅಕ್ಷರ ಜೋಡಣೆಯನ್ನು ವಿದ್ವಾನ್ ಶ್ರೀ ಮಾತರಿಶ್ವಾಚಾರ್ಯರು ಹಾಗೂ ಶ್ರೀ ಆರ್.ಎಸ್.ಪ್ರೇಮಕುಮಾರ್ ಅವರು ಅಂದವಾಗಿ ಮಾಡಿಕೊಟ್ಟಿದ್ದಾರೆ. ಇವರಿಗೆ ನಮ್ಮ ಅಭಿನಂದನೆಗಳು. ಸಂಪುಟದ ಮುದ್ರಣವನ್ನು ಸಕಾಲಕ್ಕೆ ಮುದ್ರಿಸಿಕೊಟ್ಟ ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್ ಅವರಿಗೆ, ಮುಖಪುಟ ವಿನ್ಯಾಸ ಹಾಗೂ ಸಂಪುಟದ ಬಿಡುಗಡೆ ಹಾಗೂ ಇತರೆ ಕಾರ್ಯಗಳಿಗೆ ವಿವಿಧ ಹಂತದಲ್ಲಿ ಶ್ರಮಿಸಿದ ಮಂಡಳದ ಪ್ರಧಾನ ಕಾರ್ಯದರ್ಶಿಗಳಾದ ಹೆಚ್.ಎನ್.ನಾರಾಯಣರಾವ್ ಹಾಗೂ ಮಂಡಳದ ಇತರೆ ಸಿಬ್ಬಂದಿ ವರ್ಗದವರಿಗೂ ಅಭಿನಂದನೆಗಳು.

**ಬೆಂಗಳೂರು** **ಅಧ್ಯಕ್ಷರು**

**ದಿನಾಂಕ 22.7.2017** **ಅ.ಭಾ.ಮಾ.ಮ.ಮಂಡಲ,ಬೆಂಗಳೂರು**

# ಅಣುಭಾಷ್ಯಸಾರ

ಭಾರತೀಯವೇದಾಂತದರ್ಶನಗಳಿಗೆ ಮೂಲಾಧಾರ ಮೂರು ಪ್ರಸ್ಥಾನಗಳು—ಗೀತೆ ಉಪನಿಷತ್ ಬ್ರಹ್ಮಸೂತ್ರಗಳು. ವೇದ ಉಪನಿಷತ್ತುಗಳ ತಾತ್ಪರ್ಯಾರ್ಥ ಬಹಳ ಗಹನವಾದುದು. ಬ್ರಹ್ಮಸೂತ್ರಗಳ ಸಹಾಯವಿಲ್ಲದಿದ್ದರೆ ಆ ತಾತ್ಪರ್ಯಾರ್ಥ ತಿಳಿಯದೆ ಅಪಾರ್ಥವಾಗುವ ಸಂಭವವಿದೆ.

. ಪರಾಪರವಿದ್ಯೆಗಳನ್ನು ಪರಿಚಯಿಸಲು ಹೊರಟ ಆಥರ್ವಣ ಉಪನಿಷತ್ ''ತತ್ರಾಪರಾ ಋಗ್ವೇದೋ ಯಜುರ್ವೇದಃ...' ಎಂದು ಋಗ್ವೇದಾದಿಗಳನ್ನು ಅಪರವಿದ್ಯೆಯನ್ನಾಗಿಯೇ ಪರಿಗಣಿಸಿ, ''ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂದು ಅಕ್ಷರ ಎನಿಸುವ ಭಗವಂತನ ಜ್ಞಾನಕ್ಕೆ ಸಾಧನವಾದುದೇ ಪರಮವಿದ್ಯೆ ಎಂದು ತಿಳಿಸಿದೆ. ಸಕಲವೇದಾರ್ಥಗಳನ್ನು ನಿರ್ಣಯ ಮಾಡುವ ಬ್ರಹ್ಮಸೂತ್ರದ ಸಹಕಾರವಿದ್ದಾಗ ಮಾತ್ರ ಭಗವತ್ತತ್ವವನ್ನು ಪ್ರತಿಪಾದಿಸುವ ವೇದ ಪರವಿದ್ಯೆ ಎನಿಸುವುದು. ಆದುದರಿಂದ ವೇದ ಪರವಿದ್ಯೆ ಎನಿಸುವಂತೆ ಅದಕ್ಕೆ ಸಹಾಯಕವಾಗುವ ಬ್ರಹ್ಮಸೂತ್ರವೂ ಪರವಿದ್ಯೆ ಎನಿಸುವುದು.

ಭಗವಂತನನ್ನು ಪರಿಚಯಿಸಿ ಅವನ ಒಲುಮೆಯ ಉಪಾಯವನ್ನು ತಿಳಿಸಿ ಅವನನ್ನು ಹೊಂದುವ ಮೋಕ್ಷವನ್ನು ನಿರೂಪಿಸುತ್ತವೆ ಬ್ರಹ್ಮಸೂತ್ರಗಳು.

ಮೊದಲ ಅಧ್ಯಾಯದಲ್ಲಿ ಸರ್ವಶಬ್ದಸಮನ್ವಯದ ಮೂಲಕ ಭಗವಂತನ ಗುಣಪರಿಪೂರ್ಣತೆಯನ್ನು ವಿವರಿಸಲಾಗಿದೆ. ಶ್ರೀವಿಷ್ಣುವೇ ಸರ್ವೋತ್ತಮನೆಂದು ವೇದಪುರಾಣಗಳ ತಾತ್ಪರ್ಯಸಿದ್ಧವಾದ ಅರ್ಥ. ಅಲ್ಲಲ್ಲಿ ರುದ್ರ ಹಿರಣ್ಯಗರ್ಭ

ಮುಂತಾದವರು ಸರ್ವೋತ್ತಮನೆಂದು ಹೇಳಿದ್ದರೆ ಆ ಎಲ್ಲ ಶಬ್ದಗಳೂ ವಿಷ್ಣುವನ್ನೇ ಹೇಳುತ್ತವೆಯಾದ್ದರಿಂದ ಯಾವುದೇ ಗೊಂದಲಗಳಿಲ್ಲ. ಬ್ರಹ್ಮ ರುದ್ರಾದಿಗಳು ವಿಷ್ಣು ಭಕ್ತರು ಎಂದು ತಿಳಿಸಿರುವ ವಾಕ್ಯಗಳು ದೇವತೆಗಳ ವರ್ಗದಲ್ಲಿ ಸೇರಿರುವ ಬ್ರಹ್ಮ ಶಿವ ಮುಂತಾದ ಶ್ರೇಷ್ಠ ಜೀವರಿಗೆ ಸಂಬಂಧಿಸಿವೆ. ಹೀಗೆ ಬೇರೆ ಬೇರೆ ಅರ್ಥಗಳಲ್ಲಿ ಎಲ್ಲ ವೇದ ಪುರಾಣವಾಕ್ಯಗಳನ್ನೂ ವಿಷ್ಣುವಿನಲ್ಲಿ ಸಮನ್ವಯಗೊಳಿಸಬಹುದು.

ಎರಡನೆಯ ಅಧ್ಯಾಯದಲ್ಲಿ ಪ್ರಥಮಾಧ್ಯಾಯದ ಅರ್ಥವಾದ ಸಮನ್ವಯಕ್ಕೆ ಯುಕ್ತಿ ಹಾಗೂ ಇತರ ಮತಗಳಿಂದ ವೇದ, ಯುಕ್ತಿ ಸಹಿತ ವೇದವಾಕ್ಯಗಳು ಇವುಗಳಿಂದ ವಿರೋಧಗಳನ್ನು ಪರಿಹರಿಸಲಾಗಿದೆ.

ಸಮನ್ವಯದ ಮೂಲಕ ಗುಣಪೂರ್ಣತೆಯನ್ನು ಸಾಧಿಸಲು ಹೊರಟಾಗ ಯುಕ್ತಿ ಶ್ರುತಿ ದರ್ಶನಗಳ ವಿರೋಧವನ್ನು ಪರಿಹರಿಸದಿದ್ದರೆ ಸಮನ್ವಯ ಸಾಧಿಸ ಲಾಗದೆ ಭಗವಂತನಲ್ಲಿ ದೋಷಗಳಿಗೂ ಅವಕಾಶವಾಗುತ್ತದೆ. ಆಗ ಗುಣಪೂರ್ಣತೆ ಸಿದ್ಧವಾಗುವುದಿಲ್ಲ.

ಹೀಗೆ ಸಮನ್ವಯಾಧ್ಯಾಯ–ಅವಿರೋಧ ಅಧ್ಯಾಯಗಳಿಂದ ಭಗವಂತನು ಸರ್ವಗುಣಪರಿಪೂರ್ಣ ಹಾಗೂ ನಿರ್ದೋಷ ಎಂದು ಸಿದ್ಧವಾಗುತ್ತದೆ.

ಪುರುಷಾರ್ಥಗಳಲ್ಲಿ ಸರ್ವಶ್ರೇಷ್ಠವಾದುದು ಮೋಕ್ಷ. ಅದನ್ನು ಸರ್ವೋತ್ತಮ ನಾದ ಭಗವಂತನಿಂದಲೇ ಪಡೆಯಲು ಸಾಧ್ಯ. ಮೋಕ್ಷ ಸಾಧನಗಳನ್ನು ಮೂರನೆಯ ಸಾಧನಾಧ್ಯಾಯದಲ್ಲಿ ನಿರೂಪಿಸಲಾಗಿದೆ. ಸಾಧನಗಳು ಕ್ರಮವಾಗಿ ವೈರಾಗ್ಯ, ಭಕ್ತಿ, ಉಪಾಸನೆ, ಅಪರೋಕ್ಷಜ್ಞಾನ ಎಂದು ನಾಲ್ಕು ಬಗೆಯಾಗಿವೆ. ವಿಷಯಾಸಕ್ತಿ ಯಿದ್ದವನಿಗೆ ದೇವರಲ್ಲಿ. ಭಕ್ತಿ ಬರಲು ಸಾಧ್ಯವಿಲ್ಲ. ವಿಷಯಭೋಗದಲ್ಲಿ ಜಿಹಾಸೆಯನ್ನು ಹುಟ್ಟಿಸುವ ಸಲುವಾಗಿ ಸ್ವರ್ಗ–ಭೂ–ನರಕಗಳ ಯಾತನೆಗಳನ್ನೂ ಗರ್ಭವಾಸಾದಿಕ್ಲೇಶಗಳನ್ನು ನಿರೂಪಿಸಲಾಗಿದೆ.

ಬಳಿಕ ವಿಷಯವಿರಕ್ತನಿಗೆ ಭಗವಂತನಲ್ಲಿ ಭಕ್ತಿಯನ್ನು ಹುಟ್ಟಿಸುವ ಸಲುವಾಗಿ ಅವನ ಮಹಿಮೆಗಳನ್ನು ನಿರೂಪಿಸಿದೆ.

ವೈರಾಗ್ಯ ಭಕ್ತಿಗಳೆರಡರಿಂದಲೆ ಮೋಕ್ಷ ದೊರೆಯದು. ಅದಕ್ಕೆ ಉಪಾಸನೆಯೂ ಅಗತ್ಯ. ಸಾಧಕರ ಯೋಗ್ಯತೆಗೆ ಅನುಗುಣವಾಗಿ ಭಗವಂತನಲ್ಲಿ ಹೆಚ್ಚು ಹೆಚ್ಚು ಗುಣಗಳ ಉಪಾಸನೆ ಮಾಡುವ ವಿಧಾನವನ್ನು ತಿಳಿಸಿ ಸಮಸ್ತ

ಮನುಷ್ಯೋತ್ತಮಾಧಿಕಾರಿಗಳೂ ವಿಷ್ಣುವನ್ನು ಸತ್–ಚಿತ್–ಆನಂದ–ಆತ್ಮ ಎಂಬ ಕನಿಷ್ಠ ನಾಲ್ಕು ಗುಣಗಳಿಂದ ಉಪಾಸನೆ ಮಾಡಬೇಕು.

ಜೊತೆಗೆ ಈ ನಾಲ್ಕೂ ಭೂಮಾ–ನಿರತಿಶಯ ಪರಿಪೂರ್ಣ—ಎಂದೂ ಚಿಂತಿಸಬೇಕು.

ಈ ಉಪಾಸನೆಯ ಗುರಿ ಮೋಕ್ಷ. ಸಂಸಾರಕಾರಣವಾದ ಅನಾದಿಕರ್ಮಗಳ ಕ್ಷಯವಾಗದೆ ಮೋಕ್ಷ ಸಾಧ್ಯವಿಲ್ಲ. ಮೊದಲು ಕರ್ಮಕ್ಷಯ ಯಾವುದರಿಂದ ಹೇಗೆಂಬುದನ್ನು ತಿಳಿಸಲಾಗಿದೆ.

ಭೋಗದಿಂದ ಪ್ರಾರಬ್ಧಕರ್ಮದ ನಾಶವು, ಭಗವಂತನ ಸಾಕ್ಷಾತ್ಕಾರದಿಂದ ಸಂಚಿತ ಆಗಾಮಿಕರ್ಮಗಳ ನಾಶವು ಆಗುವುದೆಂದು ತಿಳಿಸಲಾಗಿದೆ.

ಕರ್ಮಕ್ಷಯದ ಬಳಿಕ ಜೀವರು ದೇಹದಿಂದ ಹೇಗೆ ಹೊರಗೆ ಬಂದು ಹೇಗೆ ಮೇಲೇರುವರೆಂಬುದನ್ನು ನಿರೂಪಣೆ ಮಾಡಿ ಮುಂದೆ ಯಾವ ಮಾರ್ಗದಲ್ಲಿ ಮುಕ್ತಿಗೆ ಹೋಗುತ್ತಾರೆಂದು ತಿಳಿಸಲಾಗಿದೆ.

ಮುಕ್ತಿಗೆ ಹೋದ ಬಳಿಕ ಮುಕ್ತರು ಏನೇನು ಸುಖಗಳನ್ನು ಅನುಭವಿಸುವರೆಂದು ವರ್ಣಿಸಲಾಗಿದೆ.

ಇಂತಹ ಬ್ರಹ್ಮಸೂತ್ರಗಳಿಗೆ ಶ್ರೀಮಧ್ವಾಚಾರ್ಯರು ಅನುವ್ಯಾಖ್ಯಾನ, ಭಾಷ್ಯ, ನ್ಯಾಯವಿವರಣ ಮತ್ತು ಅಣುಭಾಷ್ಯಗಳೆಂಬ ನಾಲ್ಕು ಗ್ರಂಥಗಳನ್ನು ರಚಿಸಿದ್ದಾರೆ. ಪ್ರತಿನಿತ್ಯವೂ ಇಂದಿನ ಯಾಂತ್ರಿಕ ಬದುಕಿನಲ್ಲಿಯೂ ಬ್ರಹ್ಮಸೂತ್ರಗಳ ಪ್ರಮೇಯಗಳನ್ನು ಅಲ್ಪಕಾಲದಲ್ಲಿ ಅನುಸಂಧಾನಕ್ಕೆ ತಂದುಕೊಳ್ಳಲು ಅನುಕೂಲವಾಗುವಂತೆ ಕೇವಲ ಮೂವತ್ತೆರಡು ಶ್ಲೋಕಗಳ ಅಣುಭಾಷ್ಯ ಎಂಬ ಗ್ರಂಥವನ್ನು ರಚನೆ ಮಾಡಿಕೊಟ್ಟಿರುವುದು ಶ್ರೀಮಧ್ವಾಚಾರ್ಯರ ಶಿಷ್ಯವಾತ್ಸಲ್ಯ ಹಾಗೂ ತತ್ವಜ್ಞಾನದ ಕಾಳಜಿಯನ್ನು ತಿಳಿಸುತ್ತದೆ.

'ಕೃಷ್ಣನು ಪುಟ್ಟ ಬಾಯಿಯಲ್ಲಿ ಬ್ರಹ್ಮಾಂಡ ತೋರಿದಂತೆ ಈ ಪುಟ್ಟ ಕೃತಿಯಲ್ಲಿ ಬ್ರಹ್ಮಸೂತ್ರಗಳ ಭಾವಬ್ರಹ್ಮಾಂಡವನ್ನೇ ತಾವು ತೋರಿದ್ದೀರಿ' ಎಂದು ಶ್ರೀನಾರಾಯಣ ಪಂಡಿತಾಚಾರ್ಯರು ಮಧ್ವವಿಜಯದಲ್ಲಿ ವರ್ಣಿಸಿದ್ದಾರೆ. ಶ್ರೀರಾಘವೇಂದ್ರ ತೀರ್ಥರು ಮುಂತಾದ ಮಹನೀಯರು ಅಣುಭಾಷ್ಯದಲ್ಲಿ ಎಲ್ಲ ಬ್ರಹ್ಮಸೂತ್ರಗಳ ಭಾವ ಅಡಕವಾಗಿರುವುದನ್ನು ಸುಂದರವಾಗಿ ತೋರಿಸಿದ್ದಾರೆ.

ಒಂದೊಂದು ಅಧ್ಯಾಯಗಳ ಸಾರಾಂಶವನ್ನು ಒಂದೊಂದು ಉಪಸಂಹಾರ ವಾಕ್ಯಗಳಿಂದ ಆಚಾರ್ಯರು ಸಂಗ್ರಹಿಸಿರುವ ಕೌಶಲ ತುಂಬ ಸುಂದರವಾಗಿದೆ.

''ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ...ಅತೋ ಅನಂತಗುಣಃ''

ಸರ್ವದೋಷೋಜ್ಝಿತಸ್ತಸ್ಮಾದ್ ಭಗವಾನ್ ಪುರುಷೋತ್ತಮಃ ।
ಉಪಾಸ್ಯಃ ಸರ್ವವೇದೈಶ್ಚ ಸರ್ವೈರಪಿ ಯಥಾಬಲಮ್ ।
ದುಃಖಾದಿರಹಿತಾ ನಿತ್ಯಂ ಮೋದಂತೇऽವಿರತಂ ಸುಖಮ್ ॥

ಈ ನಾಲ್ಕು ವಾಕ್ಯಗಳಲ್ಲಿ ನಾಲ್ಕು ಅಧ್ಯಾಯದ ಪ್ರತಿಪಾದ್ಯವಿಷಯವನ್ನು ಸಂಗ್ರಹಿಸಿದ್ದಾರೆ.

ಈ ಅಣುಭಾಷ್ಯದ ಅನುವಾದವನ್ನು ನಮ್ಮ ಶಿಷ್ಯರಾದ ಶ್ರೀ ಸಿ.ಹೆಚ್. ಬದರೀನಾಥಾಚಾರ್ಯರು ತುಂಬ ಹಿತಮಿತವಾಗಿ ಸೂತ್ರಾರ್ಥದ ನಿರೂಪಣೆ ಯೊಂದಿಗೆ ಸುಂದರವಾಗಿ ಮಾಡಿದ್ದಾರೆ.

ಅಖಿಲ ಭಾರತ ಮಾಧ್ವ ಮಹಾಮಂಡಲದ ಸರ್ವಮೂಲ ಅನುವಾದ ಮಾಲಿಕೆಯ ಈ ಕೃತಿಯನ್ನು ನಮ್ಮ ಪಂಚಮ ಪರ್ಯಾಯ ಸಂದರ್ಭದಲ್ಲಿ ಶ್ರೀಮಧ್ವಾಚಾರ್ಯರ ಬದರಿಕಾಶ್ರಮಪ್ರವೇಶದ ಸಪ್ತಮಶತಮಾನೋತ್ಸವ ವರ್ಷದಲ್ಲಿ ಮಧ್ವವಲ್ಲಭ ಶ್ರೀ ಗೋಪಾಲಕೃಷ್ಣನಿಗೆ ಅರ್ಪಿಸಲು ಸಂತಸವಾಗುತ್ತಿದೆ. ಇದಕ್ಕಾಗಿ ಅಖಿಲ ಭಾರತ ಮಾಧ್ವ ಮಹಾ ಮಂಡಲವನ್ನು ಅಭಿನಂದಿಸುತ್ತೇವೆ.

**ಶ್ರೀ ಶ್ರೀ ವಿಶ್ವೇಶತೀರ್ಥರು**
ಪರ್ಯಾಯ ಕೃಷ್ಣಮಠ
ಪೇಜಾವರ ಅಧೋಕ್ಷಜ ಸಂಸ್ಥಾನ
ಉಡುಪಿ

श्री आनन्दतीर्थभगवत्पादाचार्यविरचितं

# ब्रह्मसूत्राणुभाष्यम्

ब्रह्मसूत्राणुभाष्य is the brief summary of Brahmasūtrabhāṣya of Śrī Ānandatīrtha. In this small work of 32 verses the central point of each adhikaraṇa is stated in one word- for example the word सर्वकर्ता states the central point of janmādhikaraṇa in one word. Similarly, पूर्णानन्दः states the main point of Aanandamayadhikarana प्रणयिता and अत्ता state the central point of Prāṇādhikaraṇa and atṛptvādhikaraṇa, each in one word. In the concluding statement of each pāda the doctrine of that pāda is stated. For example सर्वगुणत्त्वः, सर्वैः शब्दैरुच्यते states the points made in the first pāda. लिङ्गैस्सर्वैर्युतः states the point made in the second pāda. In a few cases the point made in more than one adhikaraṇa is stated by one word, eg. the words, ज्योतिः, नियन्ता state the points made in more than one adhikaraṇa.

Aṇubhāṣya is intended to make pārāyaṇa and bring

home the glory of Supreme God. Therefore the समयपाद of second Adhyāya is disposed off by the remark भ्रान्तिमूलक i.e. the schools of philosophy in समयपाद are the distortions of philosophy. The details of साधन and फल in the third and fourth adhyāyas are not given in the order of adhikaraṇas. But these are given keeping in mind the prameyas. In this way aṇubhāṣya, though brief, is very useful for pārāyaṇa and to secure the knowledge, devotion and grace of the god.

Mahāmahopādhyāya
Rāṣtrapati Praśasti Puraskṛta
**Prof. K.T. Pandurangi**
Chairman and Hon. Director
Dvaita Vedanta Studies &
Research Foundation, B'lore.

# ಮುನ್ನುಡಿ

ಭಾರತೀಯದಾರ್ಶನಿಕರ ವಿಚಾರಧಾರೆಗಳಿಗೆಲ್ಲ ಮೂಲ ಬ್ರಹ್ಮಸೂತ್ರಗಳು. ಬ್ರಹ್ಮ ಎಂದರೆ ವೇದ ಎಂದು ಅರ್ಥ. ವೇದಾರ್ಥನಿರ್ಣಾಯಕವಾದ್ದರಿಂದ ಇದನ್ನು ಬ್ರಹ್ಮಸೂತ್ರ ಎನ್ನುವರು. ವೇದಾಂತಸೂತ್ರ ಎಂದೂ ಇದನ್ನು ಕರೆಯುವರು. ಹಾಗೂ ಬ್ರಹ್ಮನನ್ನು ಪ್ರತಿಪಾದಿಸುವುದರಿಂದಲೂ ಇವುಗಳನ್ನು ಬ್ರಹ್ಮಸೂತ್ರ ಎನ್ನುವರು.

**ಯಥಾರ್ಥವಚನಾನಾಂ ಚ ಮೋಹಾರ್ಥಾನಾಂ ಚ ಸಂಶಯಮ್ ।**
**ಅಪನೇತುಂ ಹಿ ಭಗವಾನ್ ಬ್ರಹ್ಮಸೂತ್ರಮಚೀಕ್ಲೃಪತ್ ।**
**ತಸ್ಮಾತ್ ಸೂತ್ರಾರ್ಥಮಾಗೃಹ್ಯ ಕರ್ತವ್ಯಃ ಸರ್ವನಿರ್ಣಯಃ ॥**

ಶಾಸ್ತ್ರಗಳಲ್ಲಿ ಯಥಾರ್ಥವಚನಗಳೂ ಹಾಗೂ ಮೋಹಕವಚನಗಳೂ ಇವೆ. ಇದರಿಂದ ಓದುಗನಿಗೆ ಸಂಶಯವುಂಟಾಗುತ್ತದೆ. ಯಾವುದು ಮೋಹಕವಚನ ಯಾವುದು ಯಥಾರ್ಥವಚನ ಎಂಬ ನಿರ್ಣಯವನ್ನು ಮಾಡಲು ಕಷ್ಟವಾಗುವುದು. ಈ ಸಮಸ್ಯೆಯನ್ನು ಪರಿಹರಿಸಿ ಸಜ್ಜನರಿಗೆ ಯಥಾರ್ಥಜ್ಞಾನವನ್ನು ನೀಡಲು ವೇದವ್ಯಾಸದೇವರು ಬ್ರಹ್ಮಸೂತ್ರಗಳನ್ನು ರಚಿಸಿರುವರು.

**ಅರ್ಥಿತಃ ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮನುತ್ತಮಮ್ ॥**

ಬ್ರಹ್ಮಾದಿದೇವತೆಗಳು ಬಂದು ಪ್ರಾರ್ಥಿಸಿದಾಗ ಶ್ರೀಹರಿಯು ವ್ಯಾಸ ರೂಪದಿಂದ ಅವತರಿಸಿದ. ತತ್ವಜ್ಞಾನದ ಸಂರಕ್ಷಣೆಗಾಗಿ ಶ್ರೀಹರಿಯ ಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಈ ಕೃತಿಯನ್ನು ರಚಿಸಿದನು.

**ವಾಸುದೇವಾದಿರೂಪೇಣ ಚತುರ್ಮೂರ್ತಿಶ್ಚ ಸರ್ವಶಃ ।**
**ಅಥವಾ ಪಂಚಮೂರ್ತಿಃ ಸ ಪ್ರೋಕ್ತೋಽಧಿಕರಣಂ ಪ್ರತಿ ॥**

ಬ್ರಹ್ಮಸೂತ್ರಗಳ ಎಲ್ಲ ಅಧಿಕರಣಗಳು ಪದ, ಅಕ್ಷರಗಳೂ ಪರಮಾತ್ಮನ ನಾಲ್ಕು ರೂಪಗಳನ್ನು ಅಥವಾ ಐದು ರೂಪಗಳನ್ನು ಪ್ರತಿಪಾದಿಸುತ್ತಿವೆ. ಆದ್ದರಿಂದ ಈ ಗ್ರಂಥದ ಅಧ್ಯಯನ ಅವಶ್ಯ ಕರ್ತವ್ಯವಾಗಿದೆ. ಶ್ರೀಮನ್ಮಧ್ವಾಚಾರ್ಯರು ಬ್ರಹ್ಮಸೂತ್ರಗಳನ್ನು ಆಧರಿಸಿ ನಾಲ್ಕು ಕೃತಿಗಳನ್ನು ರಚಿಸಿರುವರು. ಇದು ಈ ಗ್ರಂಥದ ಮಹತ್ವವನ್ನು ತಿಳಿಸುತ್ತಿದೆ. ಆಚಾರ್ಯರ ಬ್ರಹ್ಮಸೂತ್ರ ಭಾಷ್ಯದ ಪಾರಾಯಣವಿಲ್ಲದೆ ಭೋಜನ ಸ್ವೀಕರಿಸಬಾರದೆಂಬ ವ್ರತವನ್ನು ಪ್ರಾಚೀನರು ಪರಿಪಾಲಿಸುತ್ತಿದ್ದರು. ದ್ವಾದಶೀ ಮುಂತಾದ ದಿನಗಳಲ್ಲಿ ಈ ವ್ರತಕ್ಕೆ ಭಂಗ ಉಂಟಾಗುತ್ತಿತ್ತು. ಶಿಷ್ಯರು ಪ್ರಾರ್ಥಿಸಿದಾಗ ಆಚಾರ್ಯರು ಈ ಅಣುಭಾಷ್ಯವನ್ನು ರಚಿಸಿ ನೀಡಿದರೆಂದು ಪ್ರಸಿದ್ಧಿ ಇದೆ.

ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರು ಅಣುಭಾಷ್ಯದ ಮೇಲೆ ತತ್ವಮಂಜರೀ ಎಂಬ ವ್ಯಾಖ್ಯಾನವನ್ನು ರಚಿಸಿದ್ದಾರೆ. ವೈಶಿಷ್ಟ್ಯ ಪೂರ್ಣವಾದ ಕೃತಿ ಇದಾಗಿದೆ.

**ಅನಂತೋಽರ್ಥಃ ಪ್ರಕಟಿತಃ ತ್ವಯಾಣೌ ಭಾಷ್ಯಸಂಗ್ರಹೇ ।**
**ಅಹೋ ಆತ್ಮಪರಿಜ್ಞಪ್ತ್ಯೈ ಕೃಷ್ಣೇನೇವಾನನಾಂತರೇ ॥**

ಶ್ರೀಕೃಷ್ಣ ತನ್ನ ಪುಟ್ಟ ಬಾಯಲ್ಲಿ ಬ್ರಹ್ಮಾಂಡವನ್ನು ತನ್ನ ತಾಯಿ ಯಶೋದೆಗೆ ತೋರಿಸಿದ. ಅದರಂತೆ ಆಚಾರ್ಯರೂ ಸಹ ಅಣುಭಾಷ್ಯ ವೆಂಬ ಈ ಚಿಕ್ಕ ಕೃತಿಯಲ್ಲಿ ಶ್ರೀಹರಿಯ ತತ್ವಜ್ಞಾನಕ್ಕಾಗಿ ಅನಂತವಾದ ಅರ್ಥವನ್ನು ಪ್ರದರ್ಶಿಸಿದ್ದಾರೆ. ಹೀಗೆ ನಾರಾಯಣಪಂಡಿತಾಚಾರ್ಯರು ಮಧ್ವವಿಜಯದಲ್ಲಿ ಸ್ತುತಿಸಿದ್ದಾರೆ. ಶ್ರೀರಾಘವೇಂದ್ರತೀರ್ಥರ ತತ್ವಮಂಜರಿ ಯನ್ನು ಓದಿದಾಗ 'ಅನಂತೋಽರ್ಥಃ ಪ್ರಕಟಿತಃ' ಎಂಬ ಮಾತು ಎಷ್ಟು ಸತ್ಯ ಎಂದು ಮನವರಿಕೆಯಾಗುವುದು. ಶ್ರೀರಾಘವೇಂದ್ರ ತೀರ್ಥರು ಸೂತ್ರಭಾಷ್ಯ, ನ್ಯಾಯವಿವರಣ, ಅನುವ್ಯಾಖ್ಯಾನ, ನ್ಯಾಯಸುಧಾ, ಚಂದ್ರಿಕಾದಿಗ್ರಂಥಗಳಲ್ಲಿ ಬಂದ ಅನೇಕವಿಚಾರಗಳನ್ನು ಕ್ರೋಢೀಕರಿಸಿ ತತ್ವಮಂಜರಿಯಲ್ಲಿ ಹೇಳಿರುವರು. ಎಲ್ಲ ಅಧಿಕರಣಗಳು ಹಾಗು ಅಧಿಕರಣಗಳ ಉಪಸೂತ್ರಗಳ ಅಭಿಪ್ರಾಯವನ್ನು ಆಚಾರ್ಯರ ಚಿಕ್ಕಪದದಲ್ಲಿ ಕಾಣುವ ಸೂಕ್ಷ್ಮದೃಷ್ಟಿ ಶ್ರೀರಾಘವೇಂದ್ರತೀರ್ಥರಲ್ಲಿ

ಕಾಣಬಹುದು. ಶ್ರೀರಾಘವೇಂದ್ರತೀರ್ಥರ ತತ್ವಮಂಜರಿ ಮಾತ್ರವಲ್ಲದೆ ಶ್ರೀತ್ರೈವಿಕ್ರಮಾರ್ಯ ದಾಸರ ಆನಂದಮಾಲಾ ಮೊದಲಾದ ಸುಮಾರು 28ಕ್ಕೂ ಹೆಚ್ಚಿನ ವ್ಯಾಖ್ಯಾನಗಳು ಈ ಕೃತಿಯ ಮೇಲೆ ಬಂದಿರುವುದು ಈ ಕೃತಿಯ ಮಹತ್ವವನ್ನು ಅರುಹುತ್ತಿದೆ.

ಅಶನ-ವಸನಗಳನ್ನು ನೀಡಿ ವಿದ್ಯಾದಾನವನ್ನು ಮಾಡಿದ ಮಹರ್ಷಿ ಸದೃಶರಾದ ಶ್ರೀಪೇಜಾವರಮಠದ ಶ್ರೀ ಶ್ರೀ ವಿಶ್ವೇಶತೀರ್ಥಶ್ರೀಪಾದರ ಚರಣಾರವಿಂದಗಳಲ್ಲಿ ಭಕ್ತಿಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಸಾತ್ವಿಕಕಾರ್ಯಗಳಿಗೆ ಹಾಗೂ ಜ್ಞಾನಕಾರ್ಯಗಳಿಗೂ ಬೆಂಬಲವನ್ನು ನೀಡುವ ಪೇಜಾವರಮಠದ ಶ್ರೀ ಶ್ರೀ ವಿಶ್ವಪ್ರಸನ್ನತೀರ್ಥಶ್ರೀಪಾದರಿಗೂ ಪ್ರಣಾಮಗಳು.

ಅಖಿಲಭಾರತ ಮಾಧ್ವಮಹಾಮಂಡಲವು ತತ್ವಜ್ಞಾನದ ಪ್ರಸಾರದಲ್ಲಿ ಮುಂಚೂಣಿಯಲ್ಲಿರುವ ಸಂಸ್ಥೆ. ಸರ್ವಮೂಲಗ್ರಂಥಗಳ ಕನ್ನಡ ಅನುವಾದವನ್ನು ಓದುಗರ ಕೈಗೆ ನೀಡಿ ಆಚಾರ್ಯರ ಸೇವೆಯನ್ನು ಮಾಡುತ್ತಿರುವ ಮಂಡಳದ ಪ್ರಧಾನ ಕಾರ್ಯದರ್ಶಿಗಳಾದ ಹೆಚ್.ಎನ್.ನಾರಾಯಣರಾವ್ ಹಾಗೂ ಎಲ್ಲ ಪದಾಧಿಕಾರಿಗಳು, ಸಿಬ್ಬಂದಿ ವರ್ಗವೂ ಅಭಿನಂದನಾರ್ಹರು. ಈ ಗ್ರಂಥದ ಡಿ.ಟಿ.ಪಿ ಕೆಲಸವನ್ನು ವಹಿಸಿಕೊಂಡ ಪೂರ್ಣಪ್ರಜ್ಞ ವಿದ್ಯಾಪೀಠದ ವಿದ್ವಾಂಸರಾದ ಶ್ರೀಮಾತರಿಶ್ವಾಚಾರ್ಯರಿಗೂ ಮತ್ತು ಶ್ರೀ ಆರ್.ಎಸ್.ಪ್ರೇಮ್‌ಕುಮಾರ್ ಅವರಿಗೂ ಧನ್ಯವಾದಗಳು. ಹಾಗೂ ಅಂದವಾಗಿ ಮುದ್ರಿಸಿಕೊಟ್ಟ ಓಂಕಾರ್ ಆಫ್‌ಸೆಟ್ ಮುದ್ರಣದವರಿಗೂ ಧನ್ಯವಾದಗಳು.

**ವಿದ್ವಾನ್ II ಸಿ. ಹೆಚ್. ಬದರೀನಾಥಾಚಾರ್ಯ**

ಪೂರ್ಣಪ್ರಜ್ಞವಿದ್ಯಾಪೀಠ. ಬೆಂಗಳೂರು

# ವಿಷಯಾನುಕ್ರಮಣಿಕೆ

# ॥ ಶ್ರೀಮದಣುಭಾಷ್ಯಮ್ ॥

## ಪ್ರಥಮೋಽಧ್ಯಾಯಃ

ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಮ್ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥೧॥

ವಿಷ್ಣುರೇವ ವಿಜಿಜ್ಞಾಸ್ಯಃ ಸರ್ವಕರ್ತಾಽಽಗಮೋದಿತಃ ।
ಸಮನ್ವಯಾದೀಕ್ಷತೇಶ್ಚ ಪೂರ್ಣಾನಂದೋಂಽತರಃ ಖವತ್ ॥೨॥

ಪ್ರಣೇತಾ ಜ್ಯೋತಿರಿತ್ಯಾದ್ಯೈಃ ಪ್ರಸಿದ್ಧೈರನ್ಯವಸ್ತುಷು ।
ಉಚ್ಯತೇ ವಿಷ್ಣುರೇವೈಕಃ ಸರ್ವೈಃ ಸರ್ವಗುಣತ್ವತಃ ॥೩॥

ಸರ್ವಗೋಽತ್ತಾ ನಿಯಂತಾ ಚ ದೃಶ್ಯತ್ವಾದ್ಯುಜ್ಝಿತಃ ಸದಾ ।
ವಿಶ್ವಜೀವಾಂತರತ್ವಾದ್ಯೈರ್ಲಿಙ್ಗೈಃ ಸರ್ವೈರ್ಯುತಃ ಸ ಹಿ ॥೪॥

ಸರ್ವಾಶ್ರಯಃ ಪೂರ್ಣಗುಣಃ ಸೋಽಕ್ಷರಃ ಸನ್ ಹೃದಬ್ಜಗಃ ।
ಸೂರ್ಯಾದಿಭಾಸಕಃ ಪ್ರಾಣಪ್ರೇರಕೋ ದೈವತೈರಪಿ ॥೫॥

ಜ್ಞೇಯೋ ನ ವೇದ್ಯೈಃ ಶೂದ್ರಾದ್ಯೈಃ ಕಂಪಕೋಽನ್ಯಶ್ಚ ಜೀವತಃ ।
ಪತಿತ್ವಾದಿಗುಣೈರ್ಯುಕ್ತಸ್ತದನ್ಯತ್ರ ಚ ವಾಚಕೈಃ ॥೬॥

ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ ।
ಅವ್ಯಕ್ತಃ ಕರ್ಮವಾಕ್ಯೈಶ್ಚ[1] ವಾಚ್ಯ ಏಕೋಽಮಿತಾತ್ಮಕಃ ॥೭॥

ಅವಾಂತರಂ ಕಾರಣಂ ಚ ಪ್ರಕೃತಿಃ ಶೂನ್ಯಮೇವ ಚ ।
ಇತ್ಯಾದ್ಯನ್ಯತ್ರ ನಿಯತೈರಪಿ ಮುಖ್ಯತಯೋದಿತಃ ।
ಶಬ್ದೈರತೋಽನಂತಗುಣೋ ಯಚ್ಛಬ್ದಾ ಯೋಗವೃತ್ತಯಃ ॥೮॥

॥ ಇತಿ ಪ್ರಥಮೋಽಧ್ಯಾಯಃ ॥

---

೧. ಕರ್ಮವಾಚ್ಯೈಶ್ಚ

# ದ್ವಿತೀಯೋಽಧ್ಯಾಯಃ

ಶ್ರೌತಸ್ಮೃತಿವಿರುದ್ಧತ್ವಾತ್ ಸ್ಮೃತಯೋ ನ ಗುಣಾನ್ ಹರೇಃ ।
ನಿಷೇದ್ಧುಂ ಶಕ್ನುಯುರ್ವೇದಾ ನಿತ್ಯತ್ವಾನ್ಮಾನಮುತ್ತಮಮ್ ॥ ೧ ॥

ದೇವತಾವಚನಾದಾಪೋ[೧] ವದಂತೀತ್ಯಾದಿಕಂ ವಚಃ ।
ನಾಯುಕ್ತವಾದ್ಯಸನ್ನೈವ ಕಾರಣಂ ದೃಶ್ಯತೇ ಕ್ವಚಿತ್ ॥ ೨ ॥

ಅಸಜ್ಜೀವಪ್ರಧಾನಾದಿಶಬ್ದಾ ಬ್ರಹ್ಮೈವ ನಾಪರಮ್ ।
ವದಂತಿ ಕಾರಣತ್ವೇನ ಕ್ವಾಪಿ ಪೂರ್ಣಗುಣೋ ಹರಿಃ ॥ ೩ ॥

ಸ್ವಾತಂತ್ರ್ಯಾತ್ ಸರ್ವಕರ್ತೃತ್ವಾನ್ನಾಯುಕ್ತಂ ತದ್ ವದೇಚ್ಛ್ರುತಿಃ ।
ಭ್ರಾಂತಿಮೂಲತಯಾ ಸರ್ವಸಮಯಾನಾಮಯುಕ್ತಿತಃ ॥ ೪ ॥

ನ ತದ್ವಿರೋಧಾದ್ ವಚನಂ ವೈದಿಕಂ ಶಙ್ಕ್ಯತಾಂ ವ್ರಜೇತ್ ।
ಆಕಾಶಾದಿಸಮಸ್ತಂ ಚ ತಜ್ಜಂ ತೇನೈವ ಲೀಯತೇ ॥ ೫ ॥

ಸೋಽನುತ್ಪತ್ತಿಲಯಃ ಕರ್ತಾ ಜೀವಸ್ತದ್ವಶಗಃ ಸದಾ ।
ತದಾಭಾಸೋ ಹರಿಃ ಸರ್ವರೂಪೇಷ್ವಪಿ ಸಮಃ ಸದಾ ॥ ೬ ॥

ಮುಖ್ಯಪ್ರಾಣಶ್ಚೇಂದ್ರಿಯಾಣಿ ದೇಹಶ್ಚೈವ ತದುದ್ಭವಃ[೨] ।
ಮುಖ್ಯಪ್ರಾಣವಶೇ ಸರ್ವಂ ಸ ವಿಷ್ಣೋರ್ವಶಗಃ ಸದಾ ॥ ೭ ॥

ಸರ್ವದೋಷೋಜ್ಝಿತಸ್ತಸ್ಮಾದ್ ಭಗವಾನ್ ಪುರುಷೋತ್ತಮಃ ।
ಉಕ್ತಾ ಗುಣಾಶ್ಚಾವಿರುದ್ಧಾಸ್ತಸ್ಯ ವೇದೇನ ಸರ್ವಶಃ ॥ ೮ ॥

॥ ಇತಿ ದ್ವಿತೀಯೋಽಧ್ಯಾಯಃ ॥

---

೧. ದೇವತಾವಚನಾನ್ನಾಪೋ ವದಂತೀತ್ಯಾದಿನಾ ವಚಃ ।

೨. ತದುದ್ಭವಾಃ

# ತೃತೀಯೋಽಧ್ಯಾಯಃ

ಶುಭೇನ ಕರ್ಮಣಾ ಸ್ವರ್ಗಂ ನಿರಯಂ ಚ ವಿಕರ್ಮಣಾ ।
ಮಿಥ್ಯಾಜ್ಞಾನೇನ ಚ ತಮೋ ಜ್ಞಾನೇನೈವ ಪರಂ ಪದಮ್ ॥ ೧ ॥

ಯಾತಿ ತಸ್ಮಾದ್ ವಿರಕ್ತಃ ಸನ್ ಜ್ಞಾನಮೇವ ಸಮಾಶ್ರಯೇತ್ ।
ಸರ್ವಾವಸ್ಥಾಪ್ರೇರಕಶ್ಚ ಸರ್ವರೂಪೇಷ್ವಭೇದವಾನ್ ॥ ೨ ॥

ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ ।
ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್ ॥ ೩ ॥

ಸಚ್ಚಿದಾನಂದ ಆತ್ಮೇತಿ ಮಾನುಷ್ಯೈಸ್ತು ಸುರೇಶ್ವರೈಃ ।
ಯಥಾಕ್ರಮಂ ಬಹುಗುಣೈರ್ಬ್ರಹ್ಮಣಾ ತ್ವಖಿಲೈರ್ಗುಣೈಃ ॥ ೪ ॥

ಉಪಾಸ್ಯಃ ಸರ್ವವೇದೈಶ್ಚ ಸರ್ವೈರಪಿ ಯಥಾಬಲಮ್ ।
ಜ್ಞೇಯೋ ವಿಷ್ಣುರ್ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್ ॥ ೫ ॥

ಸರ್ವೇಽಪಿ ಪುರುಷಾರ್ಥಾಃ ಸ್ಯುರ್ಜ್ಞಾನಾದೇವ ನ ಸಂಶಯಃ ।
ನ ಲಿಪ್ಯತೇ ಜ್ಞಾನವಾಂಶ್ಚ ಸರ್ವದೋಷೈರಪಿ ಕ್ವಚಿತ್ ॥ ೬ ॥

ಗುಣದೋಷೈಃ ಸುಖಸ್ಯಾಪಿ ವೃದ್ಧಿಹ್ರಾಸೌ ವಿಮುಕ್ತಿಗೌ ।
ನೃಣಾಂ ಸುರಾಣಾಂ ಮುಕ್ತೌ ತು ಸುಖಂ ಕ್ಲೃಪ್ತಂ
ಯಥಾಕ್ರಮಮ್ ॥ ೭ ॥

॥ ಇತಿ ತೃತೀಯೋಽಧ್ಯಾಯಃ ॥

## ಚತುರ್ಥೋಽಧ್ಯಾಯಃ

ವಿಷ್ಣುರ್ಬ್ರಹ್ಮ ತಥಾಽಽ ದಾತೇತ್ಯೇವಂ ನಿತ್ಯಮುಪಾಸನಮ್ ।
ಕಾರ್ಯಮಾಪದ್ಯಪಿ ಬ್ರಹ್ಮ ತೇನ ಯಾತ್ಯಪರೋಕ್ಷತಾಮ್ ॥ ೧ ॥

ಪ್ರಾರಬ್ಧಕರ್ಮಣೋಽನ್ಯಸ್ಯ ಜ್ಞಾನಾದೇವ[1] ಪರಿಕ್ಷಯಃ ।
ಅನಿಷ್ಟಸ್ಯೋಭಯಸ್ಯಾಪಿ ಸರ್ವಸ್ಯಾನ್ಯಸ್ಯ ಭೋಗತಃ ॥ ೨ ॥

ಉತ್ತರೇಷೂತ್ತರೇಷ್ವೇವಂ[2] ಯಾವದ್ ವಾಯುಂ ವಿಮುಕ್ತಿಗಾಃ ।
ಪ್ರವಿಶ್ಯ ಭುಂಜತೇ ಭೋಗಾಂಸ್ತದಂತರ್ಬಹಿರೇವ ವಾ ॥ ೩ ॥

ವಾಯುರ್ವಿಷ್ಣುಂ ಪ್ರವಿಶ್ಯೈವ ಭೋಗಾಂಶ್ಚೈವೋತ್ತರೋತ್ತರಮ್ ।
ಉತ್ಕ್ರಮ್ಯ ಮಾನುಷಾ ಮುಕ್ತಿಂ ಯಾಂತಿ ದೇಹಕ್ಷಯಾತ್ ಸುರಾಃ ॥ ೪ ॥

ಅರ್ಚಿರಾದಿಪಥಾ ವಾಯುಂ ಪ್ರಾಪ್ಯ ತೇನ ಜನಾರ್ದನಮ್ ।
ಯಾಂತ್ಯುತ್ತಮಾ ನರೋಚ್ಚಾದ್ಯಾ ಬ್ರಹ್ಮಲೋಕಾತ್ ಸಹಾಮುನಾ ॥೫॥

ಯಥಾಸಂಕಲ್ಪಭೋಗಾಶ್ಚ ಚಿದಾನಂದಶರೀರಿಣಃ ।
ಜಗತ್ಸೃಷ್ಟ್ಯಾದಿವಿಷಯೇ ಮಹಾಸಾಮರ್ಥ್ಯಮಪ್ಯೃತೇ ॥ ೬ ॥

ಯಥೇಷ್ಟಶಕ್ತಿಮಂತಶ್ಚ ವಿನಾ ಸ್ವಾಭಾವಿಕೋತ್ತಮಾನ್ ।
ಅನನ್ಯವಶಗಾಶ್ಚೈವ ವೃದ್ಧಿಹ್ರಾಸವಿವರ್ಜಿತಾಃ ।
ದುಃಖಾದಿರಹಿತಾ ನಿತ್ಯಂ ಮೋದಂತೇಽವಿರತಂ ಸುಖಮ್ ॥ ೭ ॥

ಪೂರ್ಣಪ್ರಜ್ಞೇನ ಮುನಿನಾ ಸರ್ವಶಾಸ್ತ್ರಾರ್ಥಸಂಗ್ರಹಃ ।
ಕೃತೋಽಯಂ ಪ್ರೀಯತಾಂ ತೇನ ಪರಮಾತ್ಮಾ ರಮಾಪತಿಃ ॥ ೮ ॥

ನಮೋನಮೋಽಶೇಷದೋಷದೂರ ಪೂರ್ಣಗುಣಾತ್ಮನೇ ।
ವಿರಿಂಚಿಶರ್ವಪೂರ್ವೇಡ್ಯವಂದ್ಯಾಯ ಶ್ರೀವರಾಯ ತೇ ॥ ೯ ॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ
ಬ್ರಹ್ಮಸೂತ್ರಾಣುಭಾಷ್ಯೇ ಚತುರ್ಥೋಽಧ್ಯಾಯಃ ॥

---

೧. ಜ್ಞಾನೇನ ಸ್ಯಾತ್. ೨. ಷ್ವೇವ

॥ ಶ್ರೀಗುರುಭ್ಯೋ ನಮಃ ॥

## ಶ್ರೀಮಧ್ವಾಚಾರ್ಯವಿರಚಿತಮ್

# ಅಣುಭಾಷ್ಯಮ್

## ॥ ಪ್ರಥಮೋऽಧ್ಯಾಯಃ ॥

## (ಸಮನ್ವಯಾಧ್ಯಾಯಃ)

**ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಮ್ ।**
**ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥**

ಜ್ಞಾನಾನಂದಾದಿಗುಣಗಳಿಂದ ಪರಿಪೂರ್ಣನೂ, ಚಿಂತಾದಿ ಅಶೇಷ ದೋಷಗಳಿಂದ ರಹಿತನೂ, ಸಜ್ಜನರ ಜ್ಞಾನಕ್ಕೆ ವಿಷಯನಾಗುವವನೂ, ಜ್ಞಾನಿಗಳಿಂದ ಪ್ರಾಪ್ಯನೂ ಆದ ನಾರಾಯಣನನ್ನು ಗುರುಗಳನ್ನೂ ಸಹ ನಮಸ್ಕರಿಸಿ ಸೂತ್ರಗಳ ಅರ್ಥವನ್ನು ಹೇಳುತ್ತೇವೆ.

ನಾಲ್ಕು ಅಧ್ಯಾಯಗಳ ಸಾರವನ್ನು ಹೇಳುವ ನಾಲ್ಕುವಿಶೇಷಣಗಳಿಂದ ನಾರಾಯಣನನ್ನು ಸ್ತೋತ್ರಮಾಡುತ್ತಿದ್ದಾರೆ. ಮಧ್ವಾಚಾರ್ಯರಿಗೆ ವೇದವ್ಯಾಸರೇ ಗುರುಗಳು. ಅವರೇ ಸೂತ್ರಕಾರರು. ನಾರಾಯಣದೇವರೇ ವೇದವ್ಯಾಸರು. ಇದೆಲ್ಲವನ್ನು 'ಅಪಿ'ಶಬ್ದದಿಂದ ಸೂಚಿಸಿದ್ದಾರೆ.

### ಪ್ರಥಮಪಾದ

### ॥ ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ॥ 1-1-1 ॥

ವೇದಾಧ್ಯಯನ ಶಮ-ದಮಾದಿರೂಪ ಅಧಿಕಾರಪ್ರಾಪ್ತಿಯಾದ ನಂತರದಲ್ಲಿ ಮೋಕ್ಷರೂಪಪ್ರಯೋಜನವಿರುವುದರಿಂದ ಬ್ರಹ್ಮನ ಶ್ರವಣ-ಮನನಾದಿರೂಪವಾದ ಜಿಜ್ಞಾಸೆಯನ್ನು ಮಾಡಬೇಕು.

**ಅಣುಭಾಷ್ಯ:- 'ವಿಷ್ಣುರೇವ ವಿಜಿಜ್ಞಾಸ್ಯಃ'**

ಜಿಜ್ಞಾಸಾಧಿಕರಣದ ಸಮಗ್ರ ಅಭಿಪ್ರಾಯವನ್ನು ಇಲ್ಲಿ ಸಂಗ್ರಹಿಸಿದ್ದಾರೆ. 'ತದ್ವಿಜಿಜ್ಞಾಸಸ್ವ' 'ತದ್ಬ್ರಹ್ಮ' ಎಂಬ ಶ್ರುತಿಗಳು ಬ್ರಹ್ಮನ ಜಿಜ್ಞಾಸೆಯನ್ನು ವಿಧಾನಮಾಡುತ್ತಿವೆ. 'ಬ್ರಹ್ಮ'ಶಬ್ದಕ್ಕೆ ಗುಣಪೂರ್ಣ ಎಂದು ಅರ್ಥ. ಅಲ್ಪಗುಣ ವಿಶಿಷ್ಟನಾದ ಜೀವನಿಗೂ ಸರ್ವಗುಣಪೂರ್ಣನಾದ ಬ್ರಹ್ಮನಿಗೂ ಅಭೇದವು ಅಸಂಭಾವಿತ. ಹೀಗೆ ಜೀವನಿಂದ ಭಿನ್ನನಾದ ಬ್ರಹ್ಮನು ತಿಳಿಯಲ್ಪಟ್ಟಿಲ್ಲವಾದ್ದರಿಂದ ಬ್ರಹ್ಮವಿಷಯಕವಿಚಾರವು ಕರ್ತವ್ಯವಾಗಿದೆ. ದೈವೀಮೀಮಾಂಸಾದ 'ಸ ವಿಷ್ಣುರಾಹ ಹಿ', 'ತಂ ಬ್ರಹ್ಮೇತ್ಯಾಚಕ್ಷತೇ' ಎಂಬ ಸೂತ್ರಗಳಿಂದ ವಿಷ್ಣುವೇ ಪ್ರಕೃತನಾಗಿದ್ದಾನೆ. ವಿಷ್ಣು ಮತ್ತು ಬ್ರಹ್ಮಶಬ್ದಗಳು ಸಮಾನಾರ್ಥಗಳಾಗಿವೆ. ಬ್ರಹ್ಮಸೂತ್ರದಲ್ಲಿಯೂ ಬ್ರಹ್ಮಶಬ್ದದಿಂದ ವಿಷ್ಣುವೇ ವಾಚ್ಯನಾಗಿ ಇದ್ದಾನೆ ಎಂಬ ಅಭಿಪ್ರಾಯದಿಂದ ಆಚಾರ್ಯರು 'ವಿಷ್ಣುರೇವ ವಿಜಿಜ್ಞಾಸ್ಯಃ' ಎಂದಿದ್ದಾರೆ. 'ವಿಜಿಜ್ಞಾಸ್ಯಃ' ಎಂಬಲ್ಲಿರುವ 'ವಿ'ಉಪಸರ್ಗದಿಂದ ಸೂತ್ರದ 'ಅಥ','ಅತಃ' ಶಬ್ದಗಳ ಅರ್ಥವಾದ ಅಧಿಕಾರ ಮತ್ತು ಪ್ರಯೋಜನಗಳನ್ನು ಸೂಚಿಸಿದ್ದಾರೆ; ಸಾಧಕನಾದ ವಿಷ್ಣುಭಕ್ತನೇ ಅಧಿಕಾರಿ. ಜಿಜ್ಞಾಸ್ಯನಾದ ವಿಷ್ಣುವೇ ವಿಷಯ. ಅವನ ಜ್ಞಾನದಿಂದ ಪ್ರಸಾದ. ಅದರಿಂದ ದೊರೆಯುವ ಮೋಕ್ಷವೇ ಪ್ರಯೋಜನ. ಜಿಜ್ಞಾಸ್ಯ-ಜಿಜ್ಞಾಸಕಭಾವ ಮುಂತಾದವುಗಳು ಸಂಬಂಧ.

'ವಿಷ್ಣು'ರೇವ' ಎಂಬಲ್ಲಿರುವ 'ಏವ'ಶಬ್ದದಿಂದ ವಿಷ್ಣುವೇ ಮುಖ್ಯವಾಗಿ ಜಿಜ್ಞಾಸ್ಯ. ರಮಾಬ್ರಹ್ಮಾದಿ ಇತರದೇವತೆಗಳು ಮುಖ್ಯಜಿಜ್ಞಾಸ್ಯರಲ್ಲ ಎಂದು ಸೂಚಿಸಿದ್ದಾರೆ.

## ವಿಷ್ಣುವೇ ಜಗಜ್ಜನ್ಮಾದಿಕಾರಣ

**|| ಓಂ ಜನ್ಮಾದ್ಯಸ್ಯ ಯತಃ ಓಂ || 1-1-2 ||**

ಈ ಜಗತ್ತಿನ ಸೃಷ್ಟ್ಯಾದಿಗಳೆಲ್ಲವೂ ಯಾರಿಂದ ಆಗುತ್ತಿವೆಯೋ ಅವನೇ ಬ್ರಹ್ಮ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂಬ ಶ್ರುತಿಯಲ್ಲಿ ಹೇಳಿದ ಜಗಜ್ಜನ್ಮಾದಿಕಾರಣತ್ವಲಕ್ಷಣವು ವಿಷ್ಣುವಿನಲ್ಲೇ ಸಂಭವಿಸುತ್ತದೆ. ಜೀವನಲ್ಲಿ ಇದು ಅಸಂಭಾವಿತ. ಆದ್ದರಿಂದ ಜಿಜ್ಞಾಸ್ಯನಾದ ಬ್ರಹ್ಮನು ವಿಷ್ಣುವೇ ಆಗಿದ್ದಾನೆ.

**ಅಣುಭಾಷ್ಯ:- 'ಸರ್ವಕರ್ತಾ'**

ಸರ್ವಶಬ್ದವನ್ನು ಎರಡುಬಾರಿ ಗ್ರಹಿಸಬೇಕು. ಸಂಪೂರ್ಣಜಗತ್ತಿನ ಸೃಷ್ಟಿ-ಸ್ಥಿತಿ-ಲಯ ಇವೇ ಮುಂತಾದ ಎಲ್ಲದರ ಕರ್ತನೂ ವಿಷ್ಣುವೇ ಆಗಿದ್ದಾನೆ. 'ಸರ್ವಕಾರಣಂ' ಎಂದು ಹೇಳದೇ 'ಸರ್ವಕರ್ತಾ' ಎಂದಿದ್ದಾರೆ ಆಚಾರ್ಯರು. ಇದರಿಂದ ಬ್ರಹ್ಮನು ಈ ಜಗತ್ತಿಗೆ ಉಪಾದಾನಕಾರಣನಲ್ಲ ಎಂದು ಸೂಚಿಸಿದ್ದಾರೆ.

## ಜಗತ್ಕಾರಣನಾದ ವಿಷ್ಣುವು ಶಾಸ್ತ್ರದಿಂದ ಮಾತ್ರ ಗಮ್ಯ

**|| ಓಂ ಶಾಸ್ತ್ರಯೋನಿತ್ವಾತ್ ಓಂ || 1-1-3 ||**

ಜಗತ್ತಿನ ಜನ್ಮಾದಿಗಳಿಗೆ ಕಾರಣನಾದ ಪುರುಷನು ಶಾಸ್ತ್ರದಿಂದ ಮಾತ್ರ ತಿಳಿಯಲು ಅರ್ಹನಾಗಿದ್ದಾನೆ. ವೇದಾದಿಶಾಸ್ತ್ರಗಳು ಮಾತ್ರ ಅವನ ವಿಷಯದಲ್ಲಿ ಪ್ರಮಾಣವಾಗುತ್ತವೆ. ಆದ್ದರಿಂದ ಅನುಮಾನಾದಿಗಳಿಂದ ರುದ್ರಾದಿಗಳು ಜನ್ಮಾದಿ ಕಾರಣರೆಂದು ಶಂಕಿಸಬಾರದು.

**ಅಣುಭಾಷ್ಯ:- 'ಆಗಮೋದಿತಃ'**

ಋಗಾದಿವೇದಗಳು, ಭಾರತ, ಪಂಚರಾತ್ರ, ಮೂಲರಾಮಾಯಣ ಮತ್ತು ಇವುಗಳಿಗೆ ಅವಿರೋಧಿಯಾಗಿರುವುದೆಲ್ಲವೂ ಶಾಸ್ತ್ರಗಳು. ಇವುಗಳು ಮಾತ್ರ ಜಗತ್ಕಾರಣನಾದ ಬ್ರಹ್ಮನ ವಿಷಯದಲ್ಲಿ ಪ್ರಮಾಣವಾಗುತ್ತವೆ. ಇವುಗಳೆಲ್ಲವೂ ವಿಷ್ಣುವನ್ನೇ ಜಗತ್ಕಾರಣನೆಂದು ಪ್ರತಿಪಾದಿಸುತ್ತಿವೆ.

## ರುದ್ರಾದಿಗಳು ಜಗತ್ಕಾರಣರಲ್ಲ

**|| ಓಂ ತತ್ತು ಸಮನ್ವಯಾತ್ ಓಂ || 1-1-4 ||**

ರುದ್ರಾದಿಗಳು ಜಗತ್ಕಾರಣರೆಂದು ಶಾಸ್ತ್ರದಲ್ಲಿ ಪ್ರತಿಪಾದಿತವಾಗಿಲ್ಲ. ಪಾಶುಪತಾದಿ ಆಗಮಗಳಲ್ಲಿ ರುದ್ರಾದಿಗಳು ಜಗತ್ಕಾರಣರೆಂದು ಪ್ರತಿಪಾದಿತವಾಗಿದ್ದರೂ ಅವುಗಳು ಪ್ರಮಾಣವೇ ಅಲ್ಲ. ಉಪಕ್ರಮೋಪಸಂಹಾರಾದಿ ತಾತ್ಪರ್ಯಲಿಂಗಗಳಿಂದ ಚೆನ್ನಾಗಿ ವಿಚಾರಮಾಡಿದಾಗ ವಿಷ್ಣುವೇ ಶಾಸ್ತ್ರಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ.

## ಸರ್ವಶಬ್ದಗಳಿಂದಲೂ ವಾಚ್ಯನು ವಿಷ್ಣುವೇ

ಸಮನ್ವಯಾತ್:- 'ಸಮ್' ಎಂಬುದನ್ನು ಎರಡುಬಾರಿ ಗ್ರಹಿಸಬೇಕು. ಉಪಕ್ರಮಾದಿಲಿಂಗಗಳಿಂದ ಚೆನ್ನಾಗಿ ವಿಚಾರಮಾಡಿದಾಗ ಮುಖ್ಯವಾಗಿ ಜಗತ್ಕಾರಣನೆಂದು ಸದಾಗಮಗಳಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ. ಆಯಾಯಾ ಶಬ್ದಪ್ರವೃತ್ತಿನಿಮಿತ್ತವಾದ ಗುಣಗಳೆಲ್ಲವೂ ವಿಷ್ಣುವಿನಲ್ಲೇ ಚೆನ್ನಾಗಿ ಸಂಬಂಧವನ್ನು ಹೊಂದುವುದರಿಂದ ಸರ್ವಶಬ್ದಗಳಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆ.

## ಜ್ಞಾನವಿಷಯನಾದ್ದರಿಂದ ವಿಷ್ಣುವು ಅವಾಚ್ಯನಲ್ಲ

### ॥ ಓಂ ಈಕ್ಷತೇರ್ನಾಶಬ್ದಮ್ ಓಂ ॥ 1-1-5 ॥

ಜ್ಞಾನವಿಷಯನಾದ್ದರಿಂದ ವಿಷ್ಣುವು ಅವಾಚ್ಯನಲ್ಲ. ಆದ್ದರಿಂದ ಶಾಸ್ತ್ರದ ಮುಖ್ಯಾರ್ಥವು ವಿಷ್ಣುವೇ ಆಗಿದ್ದಾನೆ. 'ಯತೋ ವಾಚೋ ನಿವರ್ತಂತೇ...' ಮುಂತಾದ ಶ್ರುತಿಗಳು ಬ್ರಹ್ಮನಿಗೆ ವಾಚ್ಯತ್ವವೇ ಇಲ್ಲವೆಂದು ನಿಷೇಧಮಾಡುತ್ತಿಲ್ಲ. ಬ್ರಹ್ಮನು ಅಪ್ರಸಿದ್ಧನೆಂಬ ಅಭಿಪ್ರಾಯದಿಂದ ಅವಾಚ್ಯನೆಂದು ಶ್ರುತಿಯು ಹೇಳುತ್ತದೆ.

**ಅಣುಭಾಷ್ಯ:- 'ಈಕ್ಷತೇಶ್ಚ'**

'ಆತ್ಮನ್ಯೇವಾತ್ಮಾನಂ ಪಶ್ಯೇತ್' ಮುಂತಾದ ಶ್ರುತಿಗಳು ವಿಷ್ಣುವನ್ನು ಜ್ಞಾನವಿಷಯ ಎನ್ನುತ್ತಿವೆ. ಪ್ರಮಾಣಗಳಿಂದ ಉಂಟಾದ ಜ್ಞಾನಕ್ಕೆ ವಿಷಯ ಎಂದು ಅಭಿಪ್ರಾಯ. ವಿಷ್ಣುವನ್ನು ತಿಳಿಸುವ ಪ್ರಮಾಣ ವೇದಮಾತ್ರ. ಹೀಗೆ ವೇದಾದಿ ವಚನದಿಂದ ಉಂಟಾದ ಜ್ಞಾನಕ್ಕೆ ವಿಷಯನಾದ್ದರಿಂಧ ವಿಷ್ಣುವು ವಾಚ್ಯನಾಗಿದ್ದಾನೆ.

ಶಬ್ದಗಳು ನಾಲ್ಕುವಿಧ. 1. ವಿಷ್ಣುವಿನಲ್ಲಿ ಪ್ರಸಿದ್ಧವಾದ ಶಬ್ದಗಳು; 2.ಲೋಕದಲ್ಲಿ ಪ್ರಸಿದ್ಧವಾದ ಶಬ್ದಗಳು; 3. ವಿಷ್ಣು ಮತ್ತು ಲೋಕ ಎರಡರಲ್ಲೂ ಪ್ರಸಿದ್ಧವಾದ ಶಬ್ದಗಳು; 4. ಶ್ರುತಿಲಿಂಗಾದಿಗಳಿಂದ ಬೇರೆಸ್ಥಳದಲ್ಲಿಯೇ ಪ್ರಸಿದ್ಧ ವಾದ ಶಬ್ದಗಳು. ಈ ಎಲ್ಲ ಶಬ್ದಗಳೂ ನಾಮಾತ್ಮಕ ಮತ್ತು ಲಿಂಗಾತ್ಮಕ ಎಂದು ಎರಡುವಿಧ.

## ಆನಂದಮಯ ಮೊದಲಾದಶಬ್ದಗಳಿಂದ ವಾಚ್ಯನು ವಿಷ್ಣುವೇ

### ॥ ಓಂ ಆನಂದಮಯೋಽಭ್ಯಾಸಾತ್ ಓಂ ॥ 1-1-12 ॥

ಆನಂದಮಯಾದಿಪ್ರಕರಣಗಳಲ್ಲಿ ಬ್ರಹ್ಮಶಬ್ದವನ್ನು ಪುನಃಪುನಃ ಹೇಳಿರುವುದರಿಂದ ಆನಂದಮಯಾದಿ ಶಬ್ದಗಳಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆ ಎಂದು ತಿಳಿಯುತ್ತದೆ. ಪ್ರಕೃತಸೂತ್ರದಲ್ಲಿರುವ ಆನಂದಮಯ ಶಬ್ದದಿಂದ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಎಂಬ ಶಬ್ದಗಳನ್ನೂ ಸ್ವೀಕರಿಸಬೇಕು.

'ಪೂರ್ಣಾನಂದ: ಉಚ್ಯತೇ ವಿಷ್ಣುರೇವೈಕಃ' ಎಂಬಲ್ಲಿರುವ 'ಏಕ'ಶಬ್ದವನ್ನು ಇಲ್ಲಿ ಇಟ್ಟುಕೊಳ್ಳಬೇಕು. 'ಏಕ'ಶಬ್ದವು ಪರಮಾತ್ಮನ ಅವಯವಗಳಿಗೂ ಅವಯವಿಯಾದ ಪರಮಾತ್ಮನಿಗೂ ಭೇದವಿಲ್ಲ ಎಂದು ಹೇಳುತ್ತದೆ. ಇದರಿಂದ 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂಬ ಶ್ರುತಿಯು ಆನಂದಮಯದ ಅವಯವ ಬ್ರಹ್ಮ ಎಂದು ಹೇಳಿರುವುದರಿಂದ ಕೇವಲ ಅವಯವವಾದ ಬ್ರಹ್ಮನ ಜಿಜ್ಞಾಸೆ ಯುಕ್ತವಾಗಲಾರದು ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಪರಮಾತ್ಮನು ತನ್ನ ಅಚಿಂತ್ಯಾದ್ಭುತ ಶಕ್ತಿಯಿಂದ ತಾನೇ ಅಂಗಾಂಗಿಭಾವವನ್ನು ಹೊಂದಿ ಕ್ರೀಡಿಸುತ್ತಾನೆ ಎಂದು ಶ್ರುತಿಸ್ಮೃತಿಗಳು ಬಣ್ಣಿಸುತ್ತಿವೆ. ಆನಂದಮಯಾದಿಶಬ್ದಗಳಲ್ಲಿರುವ 'ಮಯಟ್' ಪ್ರತ್ಯಯವು ವಿಕಾರ ಎಂಬ ಅರ್ಥದಲ್ಲಿ ಇಲ್ಲ ಎಂದು ತಿಳಿಸಲು 'ಪೂರ್ಣಾನಂದಃ' ಎಂದು ಹೇಳಿದ್ದಾರೆ. ಸೂತ್ರದಲ್ಲಿರುವ ಆನಂದಮಯಶಬ್ದವು ಯಾವರೀತಿ ಅನ್ನಮಯಾದಿಗಳಿಗೆ ಉಪಲಕ್ಷಣವಾಗಿದೆಯೋ ಹಾಗೆಯೇ 'ಪೂರ್ಣಾನಂದಃ' ಎಂಬ ಶಬ್ದವೂ ಉಪಲಕ್ಷಣವಾಗಿದೆ. ಪೂರ್ಣಾನಂದಃ ಎಂಬುದರಿಂದ ಪೂರ್ಣಾನ್ನಃ, ಪೂರ್ಣಪ್ರಾಣಃ, ಪೂರ್ಣಮನಃ, ಪೂರ್ಣವಿಜ್ಞಾನಃ ಎಂದೂ ಶಬ್ದಗಳನ್ನು ಗ್ರಹಿಸಬೇಕು. ಅಂದರೆ ಈ ಶಬ್ದಗಳೂ ವಿಷ್ಣುವಾಚಕಗಳೇ ಆಗಿವೆ.

**ಅಂತಸ್ಥನು ಶ್ರೀಹರಿ**

## ಅಂತಸ್ಥತ್ವಾಧಿಕರಣ

### ॥ ಓಂ ಅಂತಸ್ತದ್ಧರ್ಮೋಪದೇಶಾತ್ ಓಂ ॥ 1-1-20 ॥

'ಅಂತಃ ಪ್ರವಿಷ್ಟಂ ಕರ್ತಾರಮೇತಮಂತಶ್ಚಂದ್ರಮಸಿ ಮನಸಾ ಚರಂತಂ ಸಹೈವ ಸಂತಂ ನ ವಿಜಾನಂತಿ ದೇವಾಃ' ಎಂಬ ಶ್ರುತಿಯಲ್ಲಿ ಶ್ರುತವಾದ ಅಂತಸ್ಥಶಬ್ದವು ವಿಷ್ಣುವಾಚಕವೇ ಆಗಿದೆ. ಇಂದ್ರಾದಿದೇವತೆಗಳನ್ನು ಹೇಳುವುದಿಲ್ಲ. ಏಕೆಂದರೆ ಆ ಮಂತ್ರದಲ್ಲಿ ಶ್ರುತವಾದ ಕ್ಷೀರಸಮುದ್ರಶಾಯಿತ್ವ, ಬ್ರಹ್ಮಾಂಡ ವೀರ್ಯತ್ವಾದಿಗಳು ವಿಷ್ಣುಧರ್ಮಗಳಾಗಿವೆ.

**ಅಣುಭಾಷ್ಯ:- 'ಅಂತರಃ'**

ಅಂತಃಪ್ರವಿಷ್ಟರಾದವರು ಅನೇಕರಲ್ಲ. ಇಂದ್ರಾದಿ ಎಲ್ಲ ದೇವತೆಗಳಲ್ಲೂ ಒಬ್ಬನೇ ಭಗವಂತನು ಪ್ರವೇಶಿಸಿದ್ದಾನೆ. ಆದ್ದರಿಂದ ಇಂದ್ರಾದಿ ಎಲ್ಲ ಶಬ್ದಗಳು ಭಗವಂತನನ್ನೇ ಹೇಳುತ್ತವೆ.

**ವಿಶೇಷವಿಚಾರ:-** ನಾಮಾತ್ಮಕಶಬ್ದಗಳನ್ನು ಸಮನ್ವಯಮಾಡುವ ಈ ಪಾದ ದಲ್ಲಿ ಇಂದ್ರಾದಿ ಅನೇಕನಾಮಸಮನ್ವಯದ ಸಿದ್ಧಿಗಾಗಿ ಅಂತಸ್ಥತ್ವ ಎಂಬ ಲಿಂಗಾತ್ಮಕ ಶಬ್ದದ ಸಮನ್ವಯವನ್ನು ಮಾಡಿದ್ದಾರೆ.

## ಆಕಾಶಾಧಿಕರಣ

### ॥ ಓಂ ಆಕಾಶಸ್ತಲ್ಲಿಂಗಾತ್ ಓಂ ॥ 1-1-22 ॥

'ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ...' ಎಂದು ಶ್ರುತವಾದ ಆಕಾಶಶಬ್ದವು ಭೂತಾಕಾಶವನ್ನು ಹೇಳುವುದಿಲ್ಲ. 'ಸ ಏಷ ಪರೋವರೀಯಾನ್ ಉದ್ಗೀಥಃ' ಎಂಬ ಶ್ರುತಿಯಲ್ಲಿ ಸರ್ವೋತ್ತಮತ್ವಾದಿ ವಿಷ್ಣುಲಿಂಗಗಳು ಶ್ರುತವಾಗಿರುವುದರಿಂದ ವಿಷ್ಣುವಾಚಕವೇ ಆಗಿದೆ.

**ಅಣುಭಾಷ್ಯ:- 'ಖವತ್'**

'ಖಂ ವರ್ತಯತೀತಿ ಖವತ್'. ಆಕಾಶವನ್ನು ಪ್ರೇರಿಸುವವನು. ಪ್ರಾಣಸಂಚಾರಾನುಕೂಲವಾದ ಅವಕಾಶಪ್ರದಾತೃತ್ವವು ಆಕಾಶಶಬ್ದದ ಪ್ರವೃತ್ತಿ ನಿಮಿತ್ತ. ಇದು ವಿಷ್ಣುವಿನಲ್ಲಿದೆ. ಆದ ಕಾರಣ ಆಕಾಶಶಬ್ದವಾಚ್ಯ ವಿಷ್ಣುವೇ.

## ಪ್ರಾಣಾಧಿಕರಣ

### ॥ ಓಂ ಅತ ಏವ ಪ್ರಾಣಃ ಓಂ ॥ 1-1-23 ॥

'ತದ್ ವೈತ್ವಂ ಪ್ರಾಣೋऽಭವಃ ಮಹಾನ್ ಭೋಗಃ ಪ್ರಜಾಪತೇಃ...' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಾಣ ವಿಷ್ಣುವೇ ಆಗಿದ್ದಾನೆ, ಮುಖ್ಯವಾಯುವಲ್ಲ. ಏಕೆಂದರೆ 'ಶೀಶ್ಚ ತೇ ಲಕ್ಷ್ಮೀಶ್ಚ' ಎಂದು ಶ್ರೀಲಕ್ಷ್ಮೀಪತಿತ್ವ ಎಂಬ ವಿಷ್ಣುಧರ್ಮವು ಶ್ರುತವಾಗಿದೆ.

**ಅಣುಭಾಷ್ಯ:- 'ಖವತ್ ಪ್ರಣೇತಾ'**

ಪ್ರಕೃಷ್ಟನಿಯಾಮಕ. ಆಕಾಶ ಮತ್ತು ಪ್ರಾಣ ಎರಡಕ್ಕೂ ಪ್ರೇರಕನಾದ್ದರಿಂದ 'ಆ'ಶಬ್ದಗಳ ಮುಖ್ಯಾರ್ಥನೂ ಅವನೇ ಆಗಿದ್ದಾನೆ. 'ಆಕಾಶ'ಶಬ್ದವು ಯಾವ ನ್ಯಾಯದಿಂದ ಭಗವದ್ವಾಚಕವಾಗಿದೆಯೋ ಅದೇ ನ್ಯಾಯದಿಂದ ಪ್ರಾಣಶಬ್ದವೂ ಭಗವದ್ವಾಚಕವಾಗಿದೆ.

## ಜ್ಯೋತಿರಧಿಕರಣ

### ॥ ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ ॥ 1-1-24 ॥

'ವಿ ಮೇ ಕರ್ಣಾಪತಯತೋ ವಿಚಕ್ಷುರ್ವೀದಂ ಜ್ಯೋತಿರ್ಹೃದಯ ಆಹಿತಂ ಯತ್' ಶ್ರುತಿಯಲ್ಲಿರುವ ಜ್ಯೋತಿಃಶಬ್ದದಿಂದ ವಾಚ್ಯನಾದವನು ವಿಷ್ಣುವೇ ಹೊರತು ಅಗ್ನಿ ಮುಂತಾದವುಗಳಲ್ಲ. ಏಕೆಂದರೆ ಆ ಶ್ರುತಿಯಲ್ಲಿ ಕರ್ಣಾದಿ ಇಂದ್ರಿಯಗಳಿಂದ ದೂರನಾಗಿರುವಿಕೆ ಎಂಬ ವಿಷ್ಣುಲಿಂಗವಿದೆ.

**ಅಣುಭಾಷ್ಯ:- 'ಜ್ಯೋತಿಃ'** = ಜ್ಯಾಯಸೀ ಊತಿಃ ವ್ಯಾಪ್ತಿಃ ಐಶ್ವರ್ಯಂ ವಾ ಅಸ್ಯೇತಿ ಜ್ಯೋತಿಃ

ಶ್ರೇಷ್ಠವಾದ ವ್ಯಾಪ್ತಿ ಅಥವಾ ಐಶ್ವರ್ಯವುಳ್ಳವನು ವಿಷ್ಣುವೇ ಆದ್ದರಿಂದ ಜ್ಯೋತಿಶ್ಶಬ್ದವಾಚ್ಯನು ವಿಷ್ಣುವೇ.

### ॥ ಓಂ ಛಂದೋऽಭಿಧಾನಾನ್ನೇತಿ ಚೇನ್ನ ತಥಾ ಚೇತೋऽರ್ಪಣನಿಗದಾತ್ ತಥಾಹಿ ದರ್ಶಯತಿ ಓಂ ॥ ॥ 1-1- ॥

'ಗಾಯತ್ರೀ ವಾ ಇದಂ ಸರ್ವಮ್' ಎಂಬಲ್ಲಿ ಗಾಯತ್ರೀಶಬ್ದದಿಂದ ಛಂದೋವಿಶೇಷವು ವಾಚ್ಯವಾಗಿರುವುದಿಲ್ಲ, ವಿಷ್ಣುವೇ ವಾಚ್ಯನಾಗಿದ್ದಾನೆ. ಗಾನತ್ರಾಣಕರ್ತೃತ್ವರೂಪವಾದ ಗುಣವಿಶಿಷ್ಟನಾಗಿ ಭಗವಂತನ ಧ್ಯಾನಮಾಡಲು ಆ ರೀತಿ ಹೇಳಿದೆ. 'ಸರ್ವಚ್ಛಂದೋಽಭಿಧೋ ಹ್ಯೇಷಃ....' ಎಂದು ರೂಢಿಯೂ ಸಹ ಇದೆ.

## ಉತ್ತರಪ್ರಾಣಾಧಿಕರಣ

### ॥ ಓಂ ಪ್ರಾಣಸ್ತಥಾನುಗಮಾತ್ ಓಂ ॥ 1-1-28 ॥

'ಚಕ್ಷುಃಶ್ರೋತ್ರಂ ಮನೋ ವಾಕ್ ಪ್ರಾಣ' ಎಂಬ ಶ್ರುತಿಯಲ್ಲಿರುವ ಪ್ರಾಣಶಬ್ದದಿಂದ ವಾಚ್ಯನಾದವನು ವಿಷ್ಣುವೇ ಹೊರತು ವಾಯುವಲ್ಲ. ಏಕೆಂದರೆ ಆ ಪ್ರಾಣನಲ್ಲಿ 'ತಂ ದೇವಾಃ ಪ್ರಾಣಯಂತ ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ' ಎಂದು ಸರ್ವದೇವೋಪಾಸ್ಯತ್ವವು ಶ್ರುತವಾಗಿದೆ. ಇದು ವಿಷ್ಣುವಿನ ಲಿಂಗ.

**ಅಣುಭಾಷ್ಯ:- 'ಇತ್ಯಾದ್ಯೈಃ ಪ್ರಸಿದ್ಧೈರನ್ಯವಸ್ತುಷು । ಉಚ್ಯತೇ ವಿಷ್ಣುರೇವೈಕಃ ಸರ್ವೈಃ ಸರ್ವಗುಣತ್ವತಃ' ॥**

ಆನಂದಮಯ, ಆಕಾಶ, ಪ್ರಾಣ, ಇಂದ್ರ, ಜ್ಯೋತಿಷ್, ಗಾಯತ್ರೀ ಇವೇ ಮುಂತಾದ ಅನ್ಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದಗಳೆಲ್ಲವೂ ವಿಷ್ಣುವಾಚಕಗಳೇ ಆಗಿವೆ. ಏಕೆಂದರೆ ಆಯಾಯಾ ಪದಗಳಿಂದ ಹೇಳಲ್ಪಡುವ ಎಲ್ಲ ಗುಣಗಳಿಂದ ಪೂರ್ಣನಾಗಿದ್ದಾನೆ ವಿಷ್ಣು.

ಎಲ್ಲ ಶಬ್ದಗಳೂ ವಿಷ್ಣುವಾಚಕಗಳೇ ಆದಾಗ ಇಂದ್ರಾದಿಗಳನ್ನು ಹೇಳುವ ಶಬ್ದಗಳೇ ಇಲ್ಲವೆಂದಾಗುತ್ತದೆ. ಲೋಕಪ್ರಸಿದ್ಧಿಯ ವಿರೋಧವೂ ಸಂಭವಿಸುತ್ತದೆ ಎಂಬ ಆಕ್ಷೇಪವನ್ನು 'ಏಕ'ಶಬ್ದದಿಂದ ಪರಿಹರಿಸಿದ್ದಾರೆ. ಏಕ ಎಂದರೆ ಮುಖ್ಯ ಎಂದು ಅರ್ಥ. ಪರಮಮುಖ್ಯವೃತ್ತಿಯಿಂದ ವಿಷ್ಣುವೇ ವಾಚ್ಯನಾದರೂ ಮುಖ್ಯ ವೃತ್ತಿಯಿಂದ ಇಂದ್ರಾದಿದೇವತೆಗಳೂ ಆಯಾಯಾ ಶಬ್ದಗಳಿಂದ ವಾಚ್ಯರಾಗುವರು.

'ದೇವಾನಾಂ ನಾಮಧಾ ಏಕ ಏವ' ಎಲ್ಲ ದೇವತೆಗಳ ನಾಮವನ್ನು ಹೊಂದಿರುವವನು ಎಂದು ಶ್ರುತವಾಗಿರುವುದರಿಂದ ದೇವಾದಿಗಳಲ್ಲಿ ಪ್ರಸಿದ್ಧವಾದ ಸೋಮ, ಸೂರ್ಯ, ವರುಣಾದಿಶಬ್ದಗಳಿಂದ ಮಾತ್ರ ವಾಚ್ಯನಾಗುವನು. ಘಟ-ಪಟಾದಿ ಶಬ್ದಗಳಿಂದ ವಾಚ್ಯನಲ್ಲ ಎಂಬ ಶಂಕೆಯನ್ನು ಪರಿಹರಿಸಲು 'ಸರ್ವೈಃ' ಎಂದಿದ್ದಾರೆ. 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂದು ಶ್ರುತಿಯಿರುವುದರಿಂದ ಎಲ್ಲ ಶಬ್ದಗಳಿಂದಲೂ ವಾಚ್ಯನಾಗಿದ್ದಾನೆ ಎಂದು ಅಭಿಪ್ರಾಯ. ಈ ಶಬ್ದಗಳು ಔಪಚಾರಿಕವಾಗಿ ಭಗವಂತನನ್ನು ಹೇಳುವುದಲ್ಲ ಎಂದು ತಿಳಿಸಲು 'ಸರ್ವಗುಣತ್ವತಃ' ಎಂದಿದ್ದಾರೆ. ಶಬ್ದಪ್ರವೃತ್ತಿನಿಮಿತ್ತಗಳಾದ ಎಲ್ಲ ಗುಣಗಳೂ ವಿಷ್ಣುವಿನಲ್ಲೇ ಇರುವುದು. ಆದ್ದರಿಂದ ಎಲ್ಲ ಶಬ್ದಗಳ ಮುಖ್ಯಾರ್ಥನು ವಿಷ್ಣುವೇ ಆಗಿದ್ದಾನೆ.

## ದ್ವಿತೀಯಪಾದ

ಇತರ ವಸ್ತುಗಳಲ್ಲಿ ಪ್ರಸಿದ್ಧವಾದ ಲಿಂಗಾತ್ಮಕಶಬ್ದಗಳಿಗೆ ವಿಷ್ಣುವಿನಲ್ಲಿ ಪ್ರವೃತ್ತಿಯನ್ನು ಈ ಪಾದದಲ್ಲಿ ಹೇಳುತ್ತಿದ್ದಾರೆ.

## ಸರ್ವಗತತ್ವಾಧಿಕರಣ

### ॥ ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ ॥ 1-2-1 ॥

'ಏತಮಗ್ನಾವಧ್ವರ್ಯವಃ, ಏತಂ ಮಹಾವ್ರತೇ ಛಂದೋಗಾಃ, ಏತಮಸ್ಯಾಮ್, ಏತಂ ದಿವಿ, ಏತಂ ವಾಯೌ, ಏತಮಾಕಾಶೇ...' ಎಂಬ ಶ್ರುತಿಯಲ್ಲಿ ಪೃಥಿವ್ಯಾದಿಗಳಲ್ಲಿ ಇದ್ದಾನೆಂದು ಹೇಳಲ್ಪಟ್ಟಿರುವವನು ವಿಷ್ಣುವೇ ಹೊರತು ಆದಿತ್ಯಾದಿಗಳಲ್ಲ. ಸರ್ವಗತನಾದವನು ವಿಷ್ಣುವೇ. ಏಕೆಂದರೆ 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂದು ಬ್ರಹ್ಮಶಬ್ದವು ಶ್ರುತವಾಗಿದೆ.

**ಅಣುಭಾಷ್ಯ:- 'ಸರ್ವಗಃ ಲಿಂಗೈಃ ಸರ್ವೈರ್ಯುತಃ ಸ ಹಿ'**

ಎಲ್ಲ ಸ್ಥಳಗಳಲ್ಲೂ ಇರುವವನು ವಿಷ್ಣುವೇ 'ಏತಸ್ಯಾ...' ಮುಂತಾದ ಶ್ರುತಿಗಳಲ್ಲಿ ಪ್ರತಿಪಾದ್ಯನಾದವನು. ಏಕೆಂದರೆ 'ಲಿಂಗೈಃ ಸರ್ವೈರ್ಯುತಃ ಸ ಹಿ' ಈ ಪ್ರಕರಣದಲ್ಲಿ ಬಹಳವಾಗಿ ವಿಷ್ಣುವಿನ ಅಸಾಧಾರಣಧರ್ಮಗಳು ಶ್ರುತವಾಗಿವೆ.

## ಅತ್ರೃತ್ವಾಧಿಕರಣ

**|| ಓಂ ಅತ್ತಾ ಚರಾಚರಗ್ರಹಣಾತ್ ಓಂ || 1-2-9 ||**

'ಅತ್ತಾ' ಎಂದರೆ ಸಂಹರ್ತಾ ಎಂದು ಅರ್ಥ. 'ಸರ್ವಂ ವಾಽತ್ತೀತಿ ತದದಿತೇರದಿತಿತ್ವಮ್' ಎಂದು ಶ್ರುತಿಯಲ್ಲಿ ಹೇಳಲ್ಪಟ್ಟ ಸಂಹರ್ತಾ ವಿಷ್ಣುವೇ ಹೊರತು ಆದಿತ್ಯಾದಿಗಳಲ್ಲ. ಏಕೆಂದರೆ ಸರ್ವಂ ವಾ ಅತ್ತಿ ಎಂದು ಚರಾಚರ ಅತ್ರೃತ್ವವು ಶ್ರುತವಾಗಿದೆ. 'ಯೋ ದೇವಾನಾಂ ನಾಮಧಾ' ಎಂಬ ಶ್ರುತಿಯಿರುವುದರಿಂದ ಅದಿತಿಶ್ರುತಿಯು ವಿಷ್ಣುವಿನಲ್ಲಿ ಸಾವಕಾಶ. ಆದ್ದರಿಂದ ಅದಿತಿಶ್ರುತಿಯ ವಿರೋಧವಿಲ್ಲ.

## ಗುಹಾಧಿಕರಣ

**ಅಣುಭಾಷ್ಯ:- 'ಅತ್ತಾ'**

ಅಪ್ ಸಂವತ್ಸರ ಸ್ರಷ್ಟೃತ್ವ ಮುಂತಾದ ವಿಷ್ಣುಧರ್ಮಗಳು ಶ್ರುತವಾದ್ದರಿಂದ ಸರ್ವಸಂಹಾರಕನು ವಿಷ್ಣುವೇ ಆಗಿದ್ದಾನೆ.

**|| ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ || 1-2-11||**

'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ' ಎಂಬ ಶ್ರುತಿಯಲ್ಲಿ ಗುಹಾಪ್ರವಿಷ್ಟತ್ವಲಿಂಗವು ಶ್ರುತವಾದ್ದರಿಂದ ಪಿಬಂತೌ ಎಂದು ದ್ವಿವಚನಾಂತಶಬ್ದದಿಂದ ವಾಚ್ಯನಾಗಿರುವುದು ಭಗವಂತನ ಆತ್ಮ-ಅಂತರಾತ್ಮ ಎಂಬ ಎರಡು ರೂಪಗಳು, ಹೊರತು ಜೀವ-ಈಶ್ವರರಲ್ಲ. 'ಯೋ ವೇದ ನಿಹಿತಂ ಗುಹಾಯಾಮ್' ಎಂದು ಗುಹಾನಿಹಿತತ್ವವು ವಿಷ್ಣುವಿನಲ್ಲೇ ಪ್ರಸಿದ್ಧವಾಗಿದೆ.

## ಅಂತರಾಧಿಕರಣ

**ಅಣುಭಾಷ್ಯ:- 'ಅತ್ತಾ'**

ಎಲ್ಲ ಪ್ರಾಣಿಗಳ ಹೃದಯಗುಹಾದಲ್ಲಿ ಇದ್ದು ಸರ್ವಕರ್ಮಫಲಗಳನ್ನು ಭೋಗಿಸುವವನು ವಿಷ್ಣುವೇ ಆಗಿದ್ದಾನೆ.

## ॥ ಓಂ ಅಂತರ ಉಪಪತ್ತೇಃ ಓಂ ॥ 1-2-23 ॥

'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬ ಶ್ರುತಿಯಲ್ಲಿ ಶ್ರುತನಾದ ಅಕ್ಷಿಸ್ಥನು(ಕಣ್ಣಿನೊಳಗಿರುವವನು) ವಿಷ್ಣುವೇ ಹೊರತು ಅಗ್ನ್ಯಾದಿಗಳಲ್ಲ. ಅಲ್ಲಿ ಶ್ರುತವಾದ ಅಮೃತತ್ವಾದಿಲಿಂಗಗಳು, ಬ್ರಹ್ಮಶಬ್ದ ಇವುಗಳೆಲ್ಲವೂ ವಿಷ್ಣುವಿನಲ್ಲೇ ಉಪಪನ್ನವಾಗುತ್ತವೆ. 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' ಎಂದು ಉಪಕ್ರಮದಲ್ಲಿ ಹೇಳಿರುವುದರಿಂದ ಇದು ವಿಷ್ಣುಪ್ರಕರಣವಾಗಿದೆ ಆದಕಾರಣ ಈ ಶ್ರುತಿಯಲ್ಲಿ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ.

**ಅಣುಭಾಷ್ಯ:- '(ಸರ್ವಗಃ ಸನ್) ನಿಯಂತಾ'**

ವಿಷ್ಣುವಿನ ಧರ್ಮಗಳು ಈ ಪ್ರಕರಣದಲ್ಲಿ ಶ್ರುತವಾಗಿರುವುದರಿಂದ ಎಲ್ಲ ಜೀವಿಗಳ ನೇತ್ರದಲ್ಲಿ ಇದ್ದು ನಿಯಾಮಕನಾಗಿ ಆನಂದರೂಪನಾಗಿರುವವನು ವಿಷ್ಣುವೇ ಆಗಿದ್ದಾನೆ.

## ॥ ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ಓಂ ॥ 1-2-18 ॥

'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾಃ ಅಂತರೋ ಯಂ ಪೃಥಿವೀ ನ ವೇದ...' ಎಂಬ ಶ್ರುತಿಯಲ್ಲಿ ಪ್ರತಿಪಾದಿತವಾದ ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆ. ಅಧಿದೈವ-ಅಧಿಭೂತಾದಿಪ್ರಕರಣಗಳಲ್ಲಿ ಪೃಥಿವ್ಯಾದಿತತ್ತ್ವ ಆಂತರತ್ವ ಮುಂತಾದ ವಿಷ್ಣುಧರ್ಮಗಳು ಶ್ರುತವಾಗಿವೆಯಾದ್ದರಿಂದ.

**ಅಣುಭಾಷ್ಯ:- 'ನಿಯಂತಾ (ಸ ಏಕೋ ವಿಷ್ಣುರೇವ ಸರ್ವಗಃ)'**

ಅಕ್ಷಿಯಲ್ಲಿರುವ ಪರಮಾತ್ಮನೇ ಸರ್ವಪ್ರಾಣಿಗಳ ಅಂತಸ್ಥನಾಗಿ ನಿಯಾಮಕನಾಗಿದ್ದಾನೆ. ಹೀಗೆ ನಿಯಾಮಕನಾಗಿರುವುದರಿಂದ ವಿಷ್ಣುವು ಸರ್ವಜೀವರೆಂಬ ಶರೀರವುಳ್ಳವನಾಗಿರುವನು. ಸರ್ವವಸ್ತುಗಳೂ ಪರಮಾತ್ಮನಿಂದ ದೇಹನಾಶದ್ವಾರಾ ನಾಶಗೊಳಿಸಲ್ಪಡುವುದರಿಂದ ಯೋಗವೃತ್ತಿಯಿಂದಲೇ ಎಲ್ಲವೂ ವಿಷ್ಣುವಿನ ಶರೀರ ಎನಿಸುತ್ತದೆ. ಇದನ್ನು 'ನಿಯಂತಾ' ಎಂಬಲ್ಲಿ ಚ ಶಬ್ದದಿಂದ ಸೂಚಿಸಿದ್ದಾರೆ.

# ಅದೃಶ್ಯತ್ವಾಧಿಕರಣ:-

## ॥ ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ ॥ 1-2-21 ॥

'ಯತ್ತದದ್ರೇಶ್ಯಮಗ್ರಾಹ್ಯಮವರ್ಣಮಚಕ್ಷುಃಶ್ರೋತ್ರಂ ತದಪಾಣಿ ಪಾದಮ್' ಎಂಬ ಈ ಶ್ರುತಿಯಲ್ಲಿ ಹೇಳಲ್ಪಟ್ಟ ಅದೃಶ್ಯತ್ವಾದಿಗುಣವಿಶಿಷ್ಟನಾದವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಪರವಿದ್ಯಾವಿಷಯತ್ವವೇ ಮುಂತಾದ ವಿಷ್ಣುಧರ್ಮಗಳು ಈ ಪ್ರಕರಣದಲ್ಲಿ ಶ್ರುತವಾಗಿವೆ.

**ಅಣುಭಾಷ್ಯ:- 'ದೃಶ್ಯತ್ವಾದ್ಯುಜ್ಝಿತಃ ಸದಾ'**

ಚಕ್ಷುರಾದಿ ಇಂದ್ರಿಯಗಳಿಗೆ ಸಾಕಲ್ಯೇನ ಅಗೋಚರ. ಚಕ್ಷುರಾದಿ ಇಂದ್ರಿಯಗಳಿಂದ ಸಂಪೂರ್ಣವಾಗಿ ಭಗವಂತನನ್ನು ತಿಳಿಯಲು ಸಾಧ್ಯವಿಲ್ಲ. ಯಾವತ್ತಿಗೂ ಸಾಧ್ಯವಿಲ್ಲ ಎಂಬುದನ್ನು ಸೂಚಿಸಲು 'ಸದಾ' ಎಂದಿದ್ದಾರೆ. ಸದಾಶಬ್ದವು ಹಿಂದೆ ಹೇಳಿದ ಅತ್ತಾ ನಿಯಂತಾ ಎಂಬಲ್ಲಿಯೂ ಅನ್ವಯವಾಗುತ್ತದೆ. ಇದರಿಂದ ಈಶ್ವರನ ಕ್ರಿಯೆಯು ನಿತ್ಯವೆಂದು ತಿಳಿಯುತ್ತದೆ.

# ವೈಶ್ವಾನರಾಧಿಕರಣ

## ॥ ಓಂ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ಓಂ ॥ 1-2-24 ॥

'ಆತ್ಮಾನಂ ವೈಶ್ವಾನರಮುಪಾಸ್ತೇ'. 'ಅಯಮಗ್ನಿರ್ವೈಶ್ವಾನರಃ' ಮುಂತಾದ ವಾಕ್ಯಗಳಲ್ಲಿ ಶ್ರುತನಾಗಿರುವ ವೈಶ್ವಾನರನು ವಿಷ್ಣುವೇ ಹೊರತು ಅಗ್ನಿಯಲ್ಲ. ಏಕೆಂದರೆ ವೈಶ್ವಾನರಶಬ್ದಕ್ಕೆ ಆತ್ಮಶಬ್ದದ ವಿಶೇಷಣವಿದೆ. ಆತ್ಮಶಬ್ದವು ವಿಷ್ಣುವಾಚಿಯಾಗಿದೆ. ಈ ವಿಷಯದಲ್ಲಿ 'ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ' ಎಂಬ ಸ್ಮೃತಿಸಮಾಖ್ಯಾನವೂ ಇದೆ,

**ಅಣುಭಾಷ್ಯ:- 'ವಿಶ್ವಜೀವಾಂತರತ್ವಾದ್ಯೈರ್ಲಿಂಗೈಃ ಸರ್ವೈರ್ಯುತಃ ಸ ಹಿ'**

ವಿಶ್ವಜೀವಾಂತರತ್ವ(ಎಲ್ಲ ಜೀವರ ಒಳಗಿದ್ದು ಅವರನ್ನು ನಿಯಮನ

ಮಾಡುವುದು) ಇವೇ ಮುಂತಾದ ಎಲ್ಲ ವಿಧವಾದ ಲಿಂಗಾತ್ಮಕಶಬ್ದಗಳಿಂದಲೂ ವಿಷ್ಣುವೇ ವಾಚ್ಯನಾಗಿದ್ದಾನೆ. ಭಾಷ್ಯದಲ್ಲಿ 'ವಿಶ್ವಜೀವಾಂತರತ್ವಾದ್ಯೈಃ' ಎಂಬಲ್ಲಿರುವ ಆದ್ಯಶಬ್ದದಿಂದ ಪಾಚಕತ್ವ ಮೊದಲಾದ ಅನೇಕಲಿಂಗಗಳನ್ನೂ ಸಂಗ್ರಹಿಸಿದ್ದಾರೆ. ಒಂದು ನಾಮತ್ಮಕಶಬ್ದದ ಸಮನ್ವಯದಿಂದ ಅನೇಕ ಲಿಂಗಾತ್ಮಕ ಶಬ್ದಗಳ ಸಮನ್ವಯವು ಸಿದ್ಧವಾಗುತ್ತದೆ. ಈ ಉದ್ದೇಶದಿಂದ ಈ ಲಿಂಗಪಾದದಲ್ಲಿ ವೈಶ್ವಾನರವೆಂಬ ನಾಮಶಬ್ದವನ್ನು ಆಶ್ರಯಿಸಿ ಲಿಂಗಾತ್ಮಕ ಎಂದಿದ್ದಾರೆ.



## ತೃತೀಯ ಪಾದ

# ದ್ಯುಭ್ವಾದ್ಯಧಿಕರಣ

ಉಭಯತ್ರಪ್ರಸಿದ್ಧವಾದ ನಾಮ ಮತ್ತು ಲಿಂಗಾತ್ಮಕಶಬ್ದಗಳಿಗೆ ವಿಷ್ಣುವಿನಲ್ಲಿ ಸಮನ್ವಯವನ್ನು ಈ ಪಾದದಲ್ಲಿ ತೋರಿಸಿದ್ದಾರೆ.

### ॥ ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ ॥ 1-3-1 ॥

'ತಮೇವೈಕಂ ಜಾನಥ ಆತ್ಮಾನಮ್ ಅನ್ಯಾ ವಾಚೋ ವಿಮುಂಚಥ'. ಸ್ವರ್ಗ-ಭೂಮಿಗಳಿಗೆ ಆಶ್ರಯನಾದ ವ್ಯಕ್ತಿಯನ್ನು ಹೇಳುವ ಈ ಶ್ರುತಿಯಲ್ಲಿ ಆತ್ಮಶಬ್ದವು ಶ್ರುತವಾಗಿದೆ. ಆದ್ದರಿಂದ ಆ ವ್ಯಕ್ತಿ ವಿಷ್ಣುವೇ ಆಗಿದ್ದಾನೆ.

**ಅಣುಭಾಷ್ಯ:- 'ಸರ್ವಾಶ್ರಯಃ'**

'ಲಿಂಗೈಃ ಸರ್ವೈರ್ಯುತಃ ಸ ಹಿ' ಎಂಬುದು ಈ ಪಾದದ ಎಲ್ಲ ಅಧಿಕರಣಗಳಲ್ಲಿಯೂ ಅನ್ವಯವನ್ನು ಹೊಂದುತ್ತದೆ.

ದ್ಯುಭ್ವಾದ್ಯಾಯತನತ್ವವನ್ನು ಹೇಳುವ ಈ ಶ್ರುತಿಯಲ್ಲಿ ಅಹೇಯತ್ವ ಮುಕ್ತೋಪಸೃಪ್ಯತ್ವ ಮುಂತಾದ ವಿಷ್ಣುಲಿಂಗಗಳು ಶ್ರುತವಾಗಿವೆ. ಆದ್ದರಿಂದ ದ್ಯುಭ್ವಾದ್ಯಾಯತನನು ವಿಷ್ಣುವೇ ಆಗಿದ್ದಾನೆ. 'ವಾಚ್ಯ ಏಕೋ ಜನಾರ್ದನಃ' ಎಂದು ಜನಾರ್ದನಶಬ್ದವನ್ನು ಹೇಳುವ ಮೂಲಕ ಈ ಅಧಿಕರಣದಲ್ಲಿ ಹೇಳಿದ ಎಲ್ಲಾ ಸೂತ್ರಗಳ ಅಭಿಪ್ರಾಯವನ್ನು ಸಂಗ್ರಹಿಸಿದ್ದಾರೆ. ಏಕಃ ಎಂದು ಹೇಳಿ

ರುದ್ರಾದಿಗಳು ಯಾರೂ ದ್ಯುಭ್ವಾದ್ಯಾಯತನರಲ್ಲ, ವಿಷ್ಣುವೇ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

'ಸರ್ವಕರ್ತೃತ್ವಾನ್ನಾಯುಕ್ತಂ ತದ್ವದೇತ್ ಶ್ರುತಿಃ', 'ಜೀವಾತ್ ಭವಂತಿ ಭೂತಾನಿ' ಎಂಬಲ್ಲಿ ಜೀವಶಬ್ದವು ಬ್ರಹ್ಮವಾಚಕವೇ ಆಗಿದೆ. ಜೀವನಿಗೆ ಅಸ್ವಾತಂತ್ರ್ಯವು ನಿತ್ಯಸಿದ್ಧವಾಗಿದೆ. ಆದ್ದರಿಂದ ಜೀವನಿಗೆ ಕರ್ತೃತ್ವವು ಯುಕ್ತಿವಿರುದ್ಧ. ಆದ ಕಾರಣ ಪರಮಾತ್ಮನಿಗೆ ಸರ್ವಕರ್ತೃತ್ವವನ್ನು ಶ್ರುತಿಯು ಹೇಳಿರುವುದು ಸಮಂಜಸವಾಗಿದೆ.

# ಭೂಮಾಧಿಕರಣ

## ॥ ಓಂ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಓಂ ॥ 1-3-8 ॥

ವಿಷ್ಣುವಿನಲ್ಲಿ 'ತತ್ ಸುಖಮ್' ಎಂದು ಪೂರ್ಣಸುಖತ್ವವು ಶ್ರುತವಾಗಿದೆ. ನಾಮ, ವಾಕ್, ಮನಸ್ ಮುಂತಾದ ದೇವತೆಗಳನ್ನು ನಿರ್ದೇಶಿಸಿ 'ಪ್ರಾಣೋ ವಾ ಆಶಾಯಾ ಭೂಯಾನ್' ಎಂದು ಪ್ರಾಣನಿಗೆ ಉತ್ತಮತ್ವವನ್ನು ಹೇಳಲಾಗಿದೆ. ಆದ್ದರಿಂದ ಭೂಮಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ.

**ಅಣುಭಾಷ್ಯ:- 'ಪೂರ್ಣಗುಣಃ'**

ಪೂರ್ಣಸುಖತ್ವವೇ ಮೊದಲಾದ ವಿಷ್ಣುಲಿಂಗಗಳು ಶ್ರುತವಾಗಿರುವುದರಿಂದ ವಿಷ್ಣುವೇ ಭೂಮ(ಪೂರ್ಣಗುಣ). ಪೂರ್ಣಗುಣತ್ವವೇ ಭೂಮಶಬ್ದಪ್ರವೃತ್ತಿ ನಿಮಿತ್ತ ಎಂದು ತಿಳಿಸಲು ಭಾಷ್ಯದಲ್ಲಿ 'ಭೂಮ' ಎನ್ನದೇ 'ಪೂರ್ಣಗುಣಃ' ಎಂದು ಹೇಳಿದ್ದಾರೆ. ಇಲ್ಲದಿದ್ದರೆ ಗುಣಪೂರ್ಣಃ ಎಂದು ಹೇಳಬಹುದಿತ್ತು.

# ಅಕ್ಷರಾಧಿಕರಣ

## ॥ ಓಂ ಅಕ್ಷರಮಂಬರಾಂತಧೃತೇಃ ಓಂ ॥ 1-3-11 ॥

'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಓತಶ್ಚ ಪ್ರೋತಶ್ಚ' ಎಂಬ ಶ್ರುತಿಯಲ್ಲಿ ಸರ್ವಕ್ಕೂ ಆಧಾರವಾದದ್ದು ಶ್ರೀತತ್ವ. ಅದಕ್ಕೂ ಆಧಾರನೆಂದು ಅಕ್ಷರನಲ್ಲಿ ಪ್ರಕೃತ್ಯಾಧಾರತ್ವವು ಶ್ರುತವಾಗಿದೆ. ಆದ್ದರಿಂದ ಅಕ್ಷರನೆಂದರೆ ವಿಷ್ಣುವೇ, ಬ್ರಹ್ಮ ಅಥವಾ ಶ್ರೀತತ್ವವಲ್ಲ.

**ಅಣುಭಾಷ್ಯ:- 'ಸೋಽಕ್ಷರಃ'**

ಹಿಂದೆ ಹೇಳಲ್ಪಟ್ಟ ವಿಷ್ಣುವೇ ಅಕ್ಷರಶಬ್ದವಾಚ್ಯನಾದವನು. 'ಭೂತಂ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವಾಧಾರತ್ವವೇ ಮುಂತಾದ ಧರ್ಮಗಳು ವಿಷ್ಣುವಿಗೇ ಸಂಬಂಧಿಸಿದ್ದಾಗಿವೆ. ಮತ್ತು ಚತುರ್ವಿಧ ನಾಶರಾಹಿತ್ಯರೂಪ ಮಹಾಯೋಗ, ವಿದ್ವದ್ರೂಢಿಗಳಿಂದಲೂ ಅಕ್ಷರಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ. ಆಚಾರ್ಯರು 'ಜನಾರ್ದನಃ' ಎಂಬ ಶಬ್ದದಿಂದ ಇದನ್ನು ಸೂಚಿಸಿದ್ದಾರೆ.

# ಸದಧಿಕರಣ

**|| ಓಂ ಈಕ್ಷತಿಕರ್ಮವ್ಯಪದೇಶಾತ್ ಸಃ ಓಂ || 1-3-13 ||**

'ತದೈಕ್ಷತ' ಎಂದು ಈಕ್ಷಣವ್ಯಾಪಾರವು ಶ್ರುತವಾಗಿದೆ. ಅದು ಜಡದಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ 'ಸದೇವ ಸೋಮ್ಯೇದಮಗ್ರ ಆಸೀತ್' ಎಂದು ಸೃಷ್ಟಿಸ್ಥಾನದಲ್ಲಿ ಶ್ರುತವಾದ 'ಸತ್' ಎಂದರೆ ವಿಷ್ಣುವೇ ಹೊರತು ಪ್ರಧಾನಾದಿಗಳಲ್ಲ. 'ಅಜಾಯಮಾನೋ ಬಹುಧಾ ವಿಜಾಯತೇ' ಎಂದು ಅವಿಕಾರಿಯಾಗಿರುವುದಕ್ಕೂ ಬಹುಭಾವವು ಶ್ರುತವಾಗಿದೆ.

**ಅಣುಭಾಷ್ಯ:- 'ಸನ್'**

ಇದರ ಅಭಿಪ್ರಾಯವನ್ನು ಆಚಾರ್ಯರು 'ಸನ್' ಎಂಬುದರಿಂದ ಸಂಗ್ರಹಿಸಿದ್ದಾರೆ. 'ಯಚ್ಛಬ್ದಾಃ ಯೋಗವೃತ್ತಯಃ' ಎಂದು ಇಲ್ಲಿರುವ ಎಲ್ಲ ಶಬ್ದಗಳು ಯೋಗವೃತ್ತಿಯಿಂದ ಪರಮಾತ್ಮನನ್ನು ಪ್ರತಿಪಾದಿಸುತ್ತಿವೆ ಎಂದು ತಿಳಿಸಿದ್ದಾರೆ. ಸತ್ ಶಬ್ದಕ್ಕೆ ಯೋಗದಿಂದ ದೋಷರಹಿತ, ಸ್ವಾತಂತ್ರ್ಯಾದಿವಿಶಿಷ್ಟ ಎಂದು ಅರ್ಥವು 'ಸದೇವ ಸೋಮ್ಯೇದಮಗ್ರ ಆಸೀತ್' ಎಂಬ ಈ ಸೃಷ್ಟಿಪ್ರಕರಣದಲ್ಲಿ ವಿಷ್ಣುಲಿಂಗಗಳು ಶ್ರುತವಾಗಿರುವುದರಿಂದ ವಿಷ್ಣುವೇ 'ಸತ್' ಶಬ್ದದಿಂದ ವಾಚ್ಯನಾಗಿದ್ದಾನೆ.

# ದಹರಾಧಿಕರಣ

**|| ಓಂ ದಹರ ಉತ್ತರೇಭ್ಯಃ ಓಂ || 1-3-14 ||**

'ಏತಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ ಅಂತರಾಕಾಶಃ' ಎಂಬ ಈ ಶ್ರುತಿಯಲ್ಲಿ ಹೇಳಲ್ಪಟ್ಟ ಸೂಕ್ಷ್ಮಹೃತ್ಪದ್ಮದಲ್ಲಿರುವವನು ವಿಷ್ಣುವೇ ಹೊರತು ಆಕಾಶ ಅಥವಾ ಜೀವರಲ್ಲ. ಏಕೆಂದರೆ ಉತ್ತರವಾಕ್ಯದಲ್ಲಿ 'ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುಃ' ಎಂದು ಅಪಹತಪಾಪ್ಮತ್ವಾದಿಗಳು ಶ್ರುತವಾಗಿವೆ. ಅವೆಲ್ಲವೂ ವಿಷ್ಣುವಿನ ಧರ್ಮಗಳಾಗಿವೆ.

## ಹೃದಯಕಮಲದಲ್ಲಿರುವವನು ಶ್ರೀಹರಿ

**ಅಣುಭಾಷ್ಯ:- 'ಹೃದಬ್ಜಗಃ'**

'ಯೋ ವೇದ ನಿಹಿತಂ ಗುಹಾಯಾಮ್; ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಮುಂತಾದ ಶ್ರುತಿಗಳಿರುವುದರಿಂದ ಹೃದಯ ಕಮಲದಲ್ಲಿರುವವನು ವಿಷ್ಣುವೇ ಆಗಿದ್ದಾನೆ. 'ಲಿಂಗೈಃ ಸರ್ವೈರ್ಯುತೋ ಹಿ' ಸತ್ಯಕಾಮತ್ವ, ಅಪಹತಪಾಪ್ಮತ್ವಾದಿ ಲಿಂಗಗಳು ವಿಷ್ಣುವಿನಲ್ಲೇ ಅನ್ವಯವನ್ನು ಹೊಂದುತ್ತವೆ ಹೊರತು ಜೀವಾದಿಗಳಲ್ಲಿ ಅಲ್ಲ. 'ಹೃದಬ್ಜಗ ಏಕೋ ಜನಾರ್ದನಃ' ಹೃದಯಕಮಲದಲ್ಲಿರುವ ಜನಾರ್ದನ ಮಾತ್ರ ಸಂಸಾರದಿಂದ ಮೋಚನೆ ಮಾಡುವವನು ಎಂದು ಅಭಿಪ್ರಾಯ. ಇದರಿಂದ ಜೀವ ಆಕಾಶಾದಿಗಳು ಪ್ರಸಕ್ತರಲ್ಲ ಎಂದು ಸ್ಪಷ್ಟವಾಗುವುದು.

### ।। ಓಂ ಅನುಕೃತೇಸ್ತಸ್ಯ ಚ ಓಂ ।। 1-3-22 ।।

'ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಂ ಕಥಂ ನು ತದ್ ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಆನುಕೂಲ್ಯೇನ ಗೃಹ್ಯಮಾಣನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ತಮೇವ ಭಾಂತಮನುಭಾತಿ ಸರ್ವಂ' ಎಂದು ಸೂರ್ಯಾದಿತೇಜಸ್ಸುಗಳು ಆನೂಕೂಲ್ಯೇನ ಗೃಹ್ಯಮಾಣನಾದವನ ಅಧೀನವೆಂದು ಶ್ರುತವಾಗಿದೆ. 'ತಮೇವ ಭಾಂತಮನುಭಾತಿ ಸರ್ವಂ, ನ ತತ್ರ ಸೂರ್ಯೋ ಭಾತಿ' ಮುಂತಾದ ಶ್ರುತಿಗಳಲ್ಲಿ ಹೇಳಲ್ಪಟ್ಟ ತೇಜೋನಿಯಾಮಕತ್ವ ಸರ್ವಪ್ರಕಾಶತ್ವ ಸೂರ್ಯಾದ್ಯಪ್ರಕಾಶ್ಯತ್ವ ಇವೆಲ್ಲವೂ ವಿಷ್ಣುಲಿಂಗಗಳಾಗಿವೆ.

**ಅಣುಭಾಷ್ಯ:- 'ಸೂರ್ಯಾದಿಭಾಸಕಃ'**

ಸೂರ್ಯಾದಿತೇಜಸ್ಸನ್ನು ಪ್ರಕಾಶಗೊಳಿಸುವವನು ವಿಷ್ಣುವೇ.

## ವಾಮನಾಧಿಕರಣ

### ॥ ಓಂ ಶಬ್ದಾದೇವ ಪ್ರಮಿತಃ ಓಂ ॥ 1-3-24 ॥

''ಅಂಗುಷ್ಠಮಾತ್ರಃ ಪುರುಷಃ ಮಧ್ಯ ಆತ್ಮನಿ ತಿಷ್ಠತಿ । ಈಶಾನಃ'' ಎಂದು ಹೇಳಿ ಅನಂತರ ''ಊರ್ಧ್ವಂ ಪ್ರಾಣಮುನ್ನಯತಿ ಅಪಾನಂ ಪ್ರತ್ಯಗಸ್ಯತಿ । ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ'' ಎಂದು ಈಶಾನನೇ ಜಿಜ್ಞಾಸ್ಯ ಎಂಬುದು ಸಮಂಜಸವಲ್ಲ - ಎಂಬ ಆಕ್ಷೇಪವನ್ನು ಪರಿಹರಿಸಲು ಈ ಅಧಿಕರಣವು ಪ್ರವೃತ್ತವಾಗಿದೆ.

**ಅಣುಭಾಷ್ಯ:- 'ಪ್ರಾಣಪ್ರೇರಕಃ'**

ಊರ್ಧ್ವಂ ಪ್ರಾಣಂ ಎಂಬ ವಾಕ್ಯದಲ್ಲಿ ಶ್ರುತನಾದ ಪ್ರಾಣಾಪಾನಾದಿ ವಾಯುಗಳ ವ್ಯವಸ್ಥಾಪಕ ವಿಷ್ಣುವೇ ಹೊರತು ಮುಖ್ಯಪ್ರಾಣನಲ್ಲ. ಪ್ರಾಣನಿಗೂ ಪ್ರೇರಕ ವಿಷ್ಣುವೇ. ಜಿಜ್ಞಾಸ್ಯನೆಂದು ಹೇಳಲ್ಪಟ್ಟವನು ವಿಷ್ಣುವೇ ಆಗಿದ್ದಾನೆ. ಪ್ರೇರಕತ್ವವು ಮುಖ್ಯಪ್ರಾಣನಲ್ಲಿಯೂ ಇದೆ. ಆದ್ದರಿಂದ ಈಶಾನಶಬ್ದವು ಮುಖ್ಯಪ್ರಾಣವಾಚಕವೆಂದು ಪ್ರತೀತವಾಗುತ್ತಿದೆ. ಆದರೆ ಈಶಾನಶಬ್ದ ಅದಕ್ಕೆ ವಿಶೇಷಣವಾಗಿ ಹೇಳಲ್ಪಟ್ಟಿರುವ ಎಲ್ಲಾ ಶಬ್ದಗಳೂ ವಿಷ್ಣುವಾಚಕವೇ ಆಗಿವೆ. 'ಲಿಂಗೈರ್ಯುತಃ' ಎಂದು ಅಣುಭಾಷ್ಯದಲ್ಲಿ ಹೇಳಲ್ಪಟ್ಟ ಲಿಂಗಶಬ್ದವು ಶ್ರುತಿಗೂ ಉಪಲಕ್ಷಣವಾಗಿದೆ. ''ಮಧ್ಯೇ ವಾಮನಮಾಸೀನಮ್'' ಎಂಬ ಪ್ರಸಿದ್ಧವಾಮನ ಶ್ರುತಿಯಿಂದ, ''ಈಶಾನೋ ಭೂತಭವ್ಯಸ್ಯ'' ಎಂಬಲ್ಲಿ ಹೇಳಲ್ಪಟ್ಟ ಭೂತಭವ್ಯ ಈಶಿತೃತ್ವ, ವಿಶ್ವೇದೇವೋಪಾಸ್ಯತ್ವ, ವಿಮುಚ್ಯತೇ ಎಂಬಲ್ಲಿ ಶ್ರುತವಾದ ಮೋಚಕತ್ವ ''ಇತರೇಣ ತು ಜೀವಂತಿ'' ಎಂಬಲ್ಲಿ ಹೇಳಲ್ಪಟ್ಟ ಸರ್ವಜೀವನದತ್ವ ಇವೇ ಮುಂತಾದ ಲಿಂಗಗಳು ವೈಷ್ಣವ ಲಿಂಗಗಳಾಗಿವೆ. ಸೂತ್ರದಲ್ಲಿ 'ಶಬ್ದಾದೇವ' ಎಂದು ಪ್ರಮಾಣವನ್ನು ಹೇಳಿದ್ದರೂ ಶಬ್ದಾದೇವ ಎಂಬುದು ಉಪಲಕ್ಷಣ ಎಂದು ಸೂಚಿಸಲು ಲಿಂಗಗಳನ್ನು ಹೇಳಿದ್ದಾರೆ.

ಈಶಾನ್=ಮುಖ್ಯಪ್ರಾಣಾದಿಗಳನ್ನು, ಅನತಿ=ಪ್ರೇರಿಸುತ್ತಾನೆ ಎಂದು ಯೋಗದಿಂದ ವಿಷ್ಣುವಾಚಕವೆಂದು ತೋರಿಸಲು ಪ್ರಾಣಪ್ರೇರಕ ಎಂದಿದ್ದಾರೆ.

## ದೇವತಾಧಿಕರಣ

### ॥ ಓಂ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ ॥ 1-3-26 ॥

'ವೇದವಿದ್ಯಾಧಿಕಾರ ಪ್ರಯೋಜಕವಾದದ್ದು ಫಲದ ಅಪೇಕ್ಷೆ. ಇದು ದೇವತೆಗಳಿಗಿಲ್ಲವಾದ್ದರಿಂದ ವೇದವಿದ್ಯಾಧಿಕಾರವಿಲ್ಲ ಎನ್ನಬಾರದು. ಯೋಗ್ಯರಾದ ಮನುಷ್ಯರಿಗೆ ವಿದ್ಯಾಕರ್ಮಗಳಿಂದ ದೇವತಾಪದವಿಯು ಪ್ರಾಪ್ತವಾಗುತ್ತದೆ. ಆ ಪದವಿಯೂ ಸಹ ಅನಿತ್ಯವಾದ್ದರಿಂದ ದೇವತೆಗಳಿಗೂ ನಿತ್ಯಫಲದ ಅಪೇಕ್ಷೆ ಇರುವುದರಿಂದ ವೇದವಿದ್ಯಾಧಿಕಾರವಿರುತ್ತದೆ. ಅಧಿಕಾರೋಪಯೋಗಿಯಾದ ವಿಶಿಷ್ಟಬುಧ್ಯಾದಿಗಳು ದೇವತೆಗಳಲ್ಲಿಯೂ ಇದೆ ಎಂದು ಬಾದರಾಯಣರು ಅಭಿಪ್ರಾಯಪಡುತ್ತಾರೆ. ಮನುಷ್ಯರಾಗಿದ್ದಾಗ ಮಾತ್ರ ಅರ್ಥಿತ್ವವಲ್ಲ ಎಂಬ ಅರ್ಥದಲ್ಲಿ 'ಅಪಿ'ಶಬ್ದವಿದೆ.

**ಅಣುಭಾಷ್ಯ:- 'ದೈವತೈರಪಿ'**

ದೇವತೆಗಳಿಂದಲೂ ಸಹ ವೇದದಿಂದ ವಿಷ್ಣುವು ಜ್ಞೇಯನಾಗಿದ್ದಾನೆ. ಮನುಷ್ಯರಾಗಿದ್ದಾಗ ಮಾತ್ರವಲ್ಲದೆ ದೇವತೆಗಳಾದ ನಂತರವೂ ವೇದದಿಂದ ಬ್ರಹ್ಮನನ್ನು ತಿಳಿಯಬೇಕು ಎಂದು 'ಅಪಿ'ಶಬ್ದದಿಂದ ತಿಳಿಸಿದ್ದಾರೆ. ದೇವತಾಪದವಿಯಲ್ಲಿ ಅನೇಕದೇವತೆಗಳು ಹಿಂದೆ ಬಂದಿದ್ದಾರೆ. ಮುಂದೆಯೂ ಬರುತ್ತಾರೆ. ಈ ಎಲ್ಲ ದೇವತೆಗಳಿಂದಲೂ ಅವನು ಜ್ಞೇಯನೆಂದು 'ದೈವತೈಃ' ಎಂಬ ಬಹುವಚನದಿಂದ ಸೂಚಿಸಿದ್ದಾರೆ.

## ಅಪಶೂದ್ರಾಧಿಕರಣ

### ॥ ಓಂ ಶುಗಸ್ಯ ತದನಾದರಶ್ರವಣಾತ್ ತದಾದ್ರವಣಾತ್ ಸೂಚ್ಯತೇ ಹಿ ಓಂ ॥ 1-3-34 ॥

ವೇದಾಧ್ಯಯನವು ಸಂಸ್ಕಾರಸಾಪೇಕ್ಷ. ಶೂದ್ರರು ಸಂಸ್ಕಾರರಹಿತರು.

ಆದ್ದರಿಂದ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲ. ಹಾಗಾದರೆ 'ಕಥಂ ತರ್ಹಿ ಶೂದ್ರ...' ಎಂಬ ಶ್ರುತಿಯಲ್ಲಿ ಈ ರೀತಿ ಸಂಬೋಧಿತನಾದ ಶೂದ್ರನಾದ ಪೌತ್ರಾಯಣನಿಗೆ ವೇದವಿದ್ಯಾಧಿಕಾರವಾದರೂ ಹೇಗೆ? ಪೌತ್ರಾಯಣನೂ ಶೂದ್ರನೇ ಅಲ್ಲ. ಹಂಸಕೃತವಾದ ಅನಾದರವನ್ನು ಕೇಳಿದ ರಾಜ ಪೌತ್ರಾಯಣನು ಶೋಕದಿಂದ ತತ್ತ್ವಜ್ಞಾನಕ್ಕಾಗಿ ಓಡಿಬಂದ. ಹೀಗೆ ಶೋಕದಿಂದ ಆದ್ರವಣ-ಗುರುಗಳಾದ ರೈಕ್ವರಲ್ಲಿ ಧಾವಿಸಿದ್ದರಿಂದ ಶೂದ್ರನೆಂದು ಸಂಬೋಧಿತನಾದ ಹೊರತು ವರ್ಣದಿಂದ ಶೂದ್ರನಲ್ಲ. ರಾಜನಿಗೆ ಚೈತ್ರರಥವೂ ಇರುವುದು ಶ್ರುತವಾಗಿರುವುದರಿಂದ ಪೌತ್ರಾಯಣನು ಕ್ಷತ್ರಿಯನೆಂದು ತಿಳಿಯುತ್ತದೆ.

**ಅಣುಭಾಷ್ಯ:- 'ಜ್ಞೇಯೋ ನ ವೇದ್ಯೈಃ ಶೂದ್ರಾದ್ಯೈಃ'**

ಶೂದ್ರರು, ವರ್ಣಬಾಹ್ಯರು, ಸಾಧಾರಣಸ್ತ್ರೀಯರು ಇವರಿಗೆ ವೇದಗಳಿಂದ ವಿಷ್ಣುವು ಜ್ಞೇಯನಲ್ಲ. ನಿಷೇಧ ಶ್ರುತಿಯಲ್ಲಿ ಸ್ತ್ರೀಶಬ್ದವು ಇಲ್ಲದಿರುವುದರಿಂದ ಉತ್ತಮ ಸ್ತ್ರೀಯರಿಗೆ ವೇದಾಧಿಕಾರವಿದೆ ಎಂದು ತಿಳಿಯುತ್ತದೆ.

## ಕಂಪನಾಧಿಕರಣ

### ॥ ಓಂ ಕಂಪನಾತ್ ಓಂ ॥ 1-3-39 ॥

'ಏಜತಿ...' ಎಂದು ಶ್ರುತಿಯಲ್ಲಿ ಸಮಗ್ರಜಗತ್ತಿನ ಚೇಷ್ಟಕತ್ವರೂಪವಾದ ನಿರವಕಾಶಲಿಂಗವು ಶ್ರುತವಾಗಿರುವುದರಿಂದ 'ವಜ್ರ'ಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ. 'ಯ ಏತದ್ ವಿದುಃ ಅಮೃತಾಸ್ತೇ ಭವಂತಿ' ಎಂದು ವಜ್ರಜ್ಞಾನದಿಂದ ಮೋಕ್ಷವೂ ಶ್ರುತವಾಗಿದೆ. 'ವರ್ಜನಾತ್ ವಜ್ರಮುಚ್ಯತೇ' ಎಂಬ ವಚನದಂತೆ ವಜ್ರಶ್ರುತಿಯು ಸಾವಕಾಶವಾಗಿದೆ. ಆದ್ದರಿಂದ 'ಮಹದ್ಭಯಂ ವಜ್ರಮುದ್ಯತಂ' ಎಂಬ ಶ್ರುತಿಯಲ್ಲಿ ಶ್ರುತವಾದ ವಜ್ರವೆಂದರೆ ವಜ್ರಾಯುಧವಲ್ಲ, ವಿಷ್ಣುವೇ.

**ಅಣುಭಾಷ್ಯ:- 'ಕಂಪಕಃ'**

ಸಮಗ್ರಜಗತ್ತಿನ ಚೇಷ್ಟಕನು ವಿಷ್ಣುವೇ ಆಗಿದ್ದಾನೆ. ಆದ್ದರಿಂದ ವಿಷ್ಣುವೇ ವಜ್ರಶಬ್ದವಾಚ್ಯನಾದವನು. 'ಯದಿದಂ ಸರ್ವಂ ಪ್ರಾಣೇ ಸ್ಥಿತಂ ಪ್ರಾಣಾದೇಜತಿ ಚ' ಎಂಬ ಈ ಶ್ರುತಿಯು ಪ್ರಾಣನಾಮಕನಾದ ಪರಮಾತ್ಮನನ್ನು ಜಗತ್ತು

ಆಶ್ರಯಿಸಿದೆ, ಅವನಿಂದಲೇ ಈ ಜಗತ್ತು ಚಲಿಸುತ್ತಿದೆ ಎಂದು ಜಗಚ್ಚೇಷ್ಟಕತ್ವವನ್ನು ಹೇಳುತ್ತಿದೆ. ಇದು ವಿಷ್ಣುಲಿಂಗವಾಗಿದೆ. ಹೀಗೆಯೇ ಉದ್ಯತ, ಮಹದ್ಭಯ, ಪ್ರಾಣಾದಿ ಸರ್ವಶಬ್ದಗಳೂ ಮುಖ್ಯವೃತ್ತಿಯಿಂದ ಪರಮಾತ್ಮನನ್ನೇ ಹೇಳುತ್ತಿವೆ.

## ಜ್ಯೋತಿರಧಿಕರಣ

### ॥ ಓಂ ಜ್ಯೋತಿರ್ದರ್ಶನಾತ್ ಓಂ ॥ 1-3-40 ॥

'ಯೋऽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ ಉಭೌ ಲೋಕಾವನುಸಂಚರತಿ' ಎಂಬ ಶ್ರುತಿಯಲ್ಲಿರುವ ಜ್ಯೋತಿಃಶಬ್ದವು ವಿಷ್ಣುವನ್ನೇ ಹೇಳುತ್ತದೆ. 'ವಿಷ್ಣುರೇವ ಜ್ಯೋತಿಃ ವಿಷ್ಣುರೇವಾತ್ಮಾ ವಿಷ್ಣುರೇವ ಬ್ರಹ್ಮ' ಎಂದು ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ.

### ಅಣುಭಾಷ್ಯ:- 'ಕಂಪಕಃ'

ಇದರ ಸಾರವನ್ನೂ 'ಕಂಪಕಃ' ಎಂಬ ಪದದಿಂದಲೇ ಸಂಗ್ರಹಿಸಿದ್ದಾರೆ. 'ಕಂಪಕಃ ಜನಾರ್ದನಃ' ಜೀವರನ್ನು ಸಂಚಾರಮಾಡಿಸುವವನು. ಆದಿತ್ಯಾದಿಗಳು ಅಸ್ತಂಗತರಾದಾಗ ಜ್ಞಾನಪ್ರದರಾಗುವುದಿಲ್ಲ. ಉದಯಾಸ್ತಮಯಾದಿಶೂನ್ಯನಾದ ಪರಮಾತ್ಮನೇ ಜೀವರಿಗೆ ಜ್ಞಾನವನ್ನು ನೀಡುವುದರಿಂದ ಜ್ಯೋತಿಃಪದದಿಂದ ವಾಚ್ಯನಾಗಿದ್ದಾನೆ.

## ಆಕಾಶಾಧಿಕರಣ

### ॥ ಓಂ ಆಕಾಶೋऽರ್ಥಾಂತರತ್ವಾದಿವ್ಯಪದೇಶಾತ್ ಓಂ ॥ 1-3-41 ॥

'ಆಕಾಶೋ ವೈ ನಾಮ ನಾಮರೂಪಯೋಃ ನಿರ್ವಹಿತಾ, ತೇ ಯದಂತರಾ ತದ್ ಬ್ರಹ್ಮ ತದಮೃತಮ್' ಎಂಬ ಈ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಆಕಾಶವೆಂದರೆ ಪ್ರಸಿದ್ಧಾಕಾಶವಲ್ಲ. ಏಕೆಂದರೆ ಆಕಾಶಕ್ಕೆ ನಾಮರೂಪರಾಹಿತ್ಯರೂಪವಾದ ವೈಲಕ್ಷಣ್ಯವು ಶ್ರುತವಾಗಿದೆ. 'ತದ್ ಬ್ರಹ್ಮ' ಎಂದು ಬ್ರಹ್ಮತ್ವವೂ ಶ್ರುತವಾಗಿದೆ. ಆದ್ದರಿಂದ ಅಕಾಶಶಬ್ದವಾಚ್ಯನಾದವನು ವಿಷ್ಣುವೇ ಆಗಿದ್ದಾನೆ.

### ಅಣುಭಾಷ್ಯ:- 'ಅನ್ಯಶ್ಚ'

'ಅನ್ಯ' ಎಂದರೆ ವಿಲಕ್ಷಣ. 'ತೇ ಯದಂತರಾ' ಎಂದು ಪ್ರಸಿದ್ಧವಾದ ಆಕಾಶಕ್ಕಿಂತ ನಾಮರೂಪರಾಹಿತ್ಯರೂಪವೈಲಕ್ಷಣ್ಯವು ವಿಷ್ಣುವಿನಲ್ಲಿ ತೋರಿಸಲ್ಪಟ್ಟಿದೆ. ಅಥವಾ 'ಖವತ್' ಎಂಬುದರಿಂದ ಈ ಅಧಿಕರಣವು ಸಂಗ್ರಹೀತವಾಗಿದೆ ಎಂದೂ ಹೇಳಬಹುದು. 'ಆಕಾಶ ಇತಿ ಹೋವಾಚ' ಎಂಬಲ್ಲಿರುವ ಆಕಾಶಶಬ್ದವು ಯಾವ ರೀತಿ ವಿಷ್ಣುವಾಚಕವಾಗಿದೆಯೋ ಅದರಂತೆ 'ಆಕಾಶೋ ವೈ ನಾಮ' ಎಂಬಲ್ಲಿಯೂ ಆಕಾಶಶಬ್ದವು ವಿಷ್ಣುವಾಚಕವೇ ಆಗಿದೆ. ಏಕೆಂದರೆ ಶ್ರುತಿಯಲ್ಲಿ ಪ್ರಾಕೃತನಾಮ ರೂಪವುಳ್ಳ ಆಕಾಶಕ್ಕಿಂತಲೂ ಬೇರೆಯಾದ ಅಮೃತತ್ವ ನಾಮರೂಪರಾಹಿತ್ಯ ಎಂಬ ಧರ್ಮಗಳನ್ನು ಹೇಳಲಾಗಿದೆ.

## ಸುಷುಪ್ತ್ಯಧಿಕರಣ

### ॥ ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ ॥ 1-3-42 ॥

'ಸ ಯತ್ತತ್ರ ಕಿಂಚಿತ್ ಪಶ್ಯತ್ಯನನ್ವಾಗತಸ್ತೇನ ಭವತಿ' ಎಂಬಲ್ಲಿ ಹೇಳಿರುವ ಸ್ವಪ್ನಾದಿದ್ರಷ್ಟೃವು ವಿಷ್ಣುವೇ, ಜೀವನಲ್ಲ. ಏಕೆಂದರೆ 'ಅಸಂಗೋ ಹ್ಯಯಂ ಪುರುಷಃ' ಎಂದು ಅಸಂಗತ್ವರೂಪವಾದ ವಿಷ್ಣುಲಿಂಗವು ಶ್ರುತವಾಗಿದೆ. ಜೀವಬ್ರಹ್ಮರಿಗೆ ಅಭೇದವಿರುವುದರಿಂದ ಜೀವನಿಗೂ ಅಸಂಗತ್ವವಿದೆ ಎನ್ನುವುದು ಸಮಂಜಸವಲ್ಲ. 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ'. 'ಪ್ರಾಜ್ಞೇನಾತ್ಮನಾಽನ್ವಾರೂಢಃ' ಎಂಬುದಾಗಿ ಸುಷುಪ್ತಿ ಹಾಗು ಉತ್ಕ್ರಾಂತಿಪ್ರಕರಣಗಳಲ್ಲಿ ಜೀವ-ಬ್ರಹ್ಮರಿಗೆ ಭೇದವೇ ಹೇಳಲ್ಪಟ್ಟಿದೆ.

**ಅಣುಭಾಷ್ಯ:- 'ಅನ್ಯಶ್ಚ ಜೀವತಃ'**

ಜೀವತಃ ಅನ್ಯಶ್ಚ ಜನಾರ್ದನಃ. ಜೀವರಿಂದ ಭಿನ್ನನಾಗಿದ್ದಾನೆ ಜನಾರ್ದನ. 'ಅನನ್ವಾಗತಸ್ತೇನ' ಎಂಬಲ್ಲಿ ಪರಮಾತ್ಮನಿಗೆ ಸ್ವಪ್ನದರ್ಶನದಿಂದಾಗುವ ವಿಕಾರರಾಹಿತ್ಯರೂಪ ಅಸಂಗತ್ವವು ಹೇಳಲ್ಪಟ್ಟಿದೆ. 'ಅನನ್ವಾಗತಂ ಪುಣ್ಯೇನ' ಎಂಬುದರಿಂದ ಪುಣ್ಯಪಾಪ ಅಲೇಪವು ಹೇಳಲ್ಪಟ್ಟಿದೆ. ಇದೆಲ್ಲವೂ ವಿಷ್ಣುವಿನ ಲಿಂಗಗಳಾಗಿವೆ. ಆದ್ದರಿಂದ ಜೀವನಿಂದ ಅತ್ಯಂತಭಿನ್ನನಾದ ಪರಮಾತ್ಮನೇ ದ್ರವತಿ ಸಂಪತ್ಸ್ಯತಿ ಇತ್ಯಾದಿ ಪದಗಳಿಂದ ವಾಚ್ಯನಾಗಿದ್ದಾನೆ.

## ಬ್ರಾಹ್ಮಣಾಧಿಕರಣ

### ॥ ಓಂ ಪತ್ಯಾದಿಶಬ್ದೇಭ್ಯಃ ಓಂ ॥ 1-3-43 ॥

'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬಲ್ಲಿ ಶ್ರುತವಾದ ಬ್ರಾಹ್ಮಣಶಬ್ದವು ವಿಷ್ಣುವಾಚಕವಾಗಿದೆ. ಏಕೆಂದರೆ, ಆ ಪ್ರಕರಣದಲ್ಲಿ 'ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ, ಏಷ ಸರ್ವೇಶ್ವರಃ' ಎಂದು ಸರ್ವಾಧಿಪತಿತ್ವಾದಿ ವಿಷ್ಣುಧರ್ಮಗಳು ಶ್ರುತವಾಗಿವೆ.

**ಅಣುಭಾಷ್ಯ:- 'ಪತಿತ್ವಾದಿಗುಣೈರ್ಯುಕ್ತಃ'**

ಭಾವಾರ್ಥ:- ಬ್ರಾಹ್ಮಣಶಬ್ದವು ಚತುರ್ಮುಖನಲ್ಲಿ ರೂಢವಾಗಿದ್ದರೂ ಮಹಾಯೋಗ ಮತ್ತು ವಿದ್ವದ್ರೂಢಿಯಿಂದ ಬ್ರಾಹ್ಮಣ, ಅಜ ಮುಂತಾದ ಶಬ್ದಗಳು ವಿಷ್ಣುವಾಚಕಗಳಾಗಿವೆ. ಬ್ರಹ್ಮಣಾ = ವೇದದಿಂದ, ಅಣ್ಯತೇ = ತಿಳಿಯಲ್ಪಡುತ್ತಾನೆ ಅಥವಾ ಹೊಂದಲ್ಪಡುತ್ತಾನೆ. ಹೀಗೆ ಯೋಗವೃತ್ತಿಯಿಂದ ಬ್ರಾಹ್ಮಣಶಬ್ದವು ವಿಷ್ಣುವಾಚಕವೇ ಆಗಿದೆ.

**ಅಣುಭಾಷ್ಯ:- 'ತದನ್ಯತ್ರ ಚ ವಾಚಕೈಃ । ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ' ॥**

ರುದ್ರ-ವಾಯುಗಳಿಂದ ಆರಂಭಿಸಿ ಚತುರ್ಮುಖಬ್ರಹ್ಮದೇವರಪರ್ಯಂತ ಅವರುಗಳಲ್ಲಿ ಪ್ರಸಿದ್ಧವಾದ ಎಲ್ಲ ಶಬ್ದಗಳಿಂದಲೂ ಮುಖ್ಯವೃತ್ತಿಯಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆ. ಅನ್ಯತ್ರ = ರುದ್ರವಾಯ್ವಾದಿಗಳಿಂದ ಇತರತ್ರ ಅಜಗಜಾದಿಗಳಿಂದಾರಂಭಿಸಿ ಘಟಲೋಷ್ಟಾಂತ ವಸ್ತುಗಳವರೆಗೆ ಆಯಾಯಾ ವಸ್ತುಗಳ ವಾಚಕವೆಂದು ಲೋಕಸಿದ್ಧವಾದ ನಾಮಲಿಂಗಾತ್ಮಕ ಎಲ್ಲ ಶಬ್ದಗಳಿಂದಲೂ ವಿಷ್ಣು ಒಬ್ಬನೇ ಮುಖ್ಯವೃತ್ತಿಯಿಂದ ವಾಚ್ಯನಾಗಿದ್ದಾನೆ.



## ಚತುರ್ಥ ಪಾದ

ಈ ಪಾದದಲ್ಲಿ ಶ್ರುತಿಲಿಂಗಾದಿಗಳಿಂದ ಅನ್ಯತ್ರೈವ ಪ್ರಸಿದ್ಧವಾದ ನಾಮಾತ್ಮಕ ಮತ್ತು ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು ತೋರಿಸುತ್ತಾರೆ.

# ಆನುಮಾನಿಕಾಧಿಕರಣಮ್

## ॥ ಓಂ ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇಃ ದರ್ಶಯತಿ ಚ ಓಂ ॥ 1-4-1 ॥

'ಅವ್ಯಕ್ತಾತ್ ಪುರುಷಃ ಪರಃ', 'ಜೀವಾ ಏವ ತು ದುಃಖಿನಃ' ಮುಂತಾದ ವಾಕ್ಯಗಳಲ್ಲಿ ಹೇಳಲ್ಪಟ್ಟಿರುವ ಜೀವ, ಅವ್ಯಕ್ತ, ಬದ್ಧ ಮೊದಲಾದ ಶಬ್ದಗಳು ಅನುಮಾನಸಿದ್ಧವಾದ ಪ್ರಕೃತ್ಯಾದಿಗಳನ್ನು ಪರಮಮುಖ್ಯವೃತ್ತಿಯಿಂದ ಹೇಳುವುದಿಲ್ಲ. ಅವೆಲ್ಲವೂ ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನೇ ಪ್ರತಿಪಾದಿಸುತ್ತಿವೆ. ಪ್ರಧಾನಾದಿಗಳಲ್ಲಿ ವಿಷ್ಣುವಿನ ಸಂಬಂಧವಿರುವುದರಿಂದ ಪ್ರಧಾನಾದಿಗಳಲ್ಲೂ ಅವ್ಯಕ್ತಾದಿ ಶಬ್ದಪ್ರಯೋಗವಿದೆ. ಆದರೆ ಅವ್ಯಕ್ತಾದಿಶಬ್ದಗಳ ಪ್ರವೃತ್ತಿನಿಮಿತ್ತದ ಸ್ವಾಮಿತ್ವವು ಪರಮಾತ್ಮನಲ್ಲಿದೆ. ಅಂದರೆ ಬಂಧನ-ದುಃಖಾದಿಗಳೆಲ್ಲವೂ ಭಗವಂತನ ಅಧೀನವಾಗಿವೆ. ಆದಕಾರಣ ಆಯಾ ಶಬ್ದಗಳಿಂದ ವಿಷ್ಣುವೇ ವಾಚ್ಯನಾಗುವನು.

**ಅಣುಭಾಷ್ಯ:- 'ಅನ್ಯತ್ರ ನಿಯತ್ಯೈಃ'**

ಭಾವಾರ್ಥ:- ಈ ವಾಕ್ಯವು ಈ ಪಾದದ ಎಲ್ಲ ಅಧಿಕರಣಗಳಲ್ಲೂ ಅನ್ವಯವನ್ನು ಹೊಂದಿದೆ. ಇತರಸ್ಥಳದಲ್ಲಿಯೇ ಪ್ರಸಿದ್ಧವಾದ ಶಬ್ದಗಳಿಂದ ಪರಮಮುಖ್ಯವೃತ್ತಿಯಿಂದ ವಿಷ್ಣುವೇ ವಾಚ್ಯನಾಗಿದ್ದಾನೆ.

**ಅಣುಭಾಷ್ಯ:- 'ಅವ್ಯಕ್ತಃ'**

'ಅವ್ಯಕ್ತೋऽಕ್ಷರ ಉಚ್ಯತೇ', 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿ ಪ್ರಮಾಣಗಳಿಂದ ಅವ್ಯಕ್ತಾದಿಶಬ್ದಗಳು ವಿಷ್ಣುವಾಚಕಗಳೇ ಆಗಿವೆ ಎಂದು ಸಿದ್ಧವಾಗುತ್ತದೆ. ಅವ್ಯಕ್ತಾದಿಶಬ್ದಗಳ ಪ್ರವೃತ್ತಿನಿಮಿತ್ತಗಳಾದ ಸೂಕ್ಷ್ಮತ್ವಾದಿಗಳು ವಿಷ್ಣುವಿನಲ್ಲೇ ಇವೆ. ಆದಕಾರಣ ಮುಖ್ಯವೃತ್ತಿಯಿಂದ ವಿಷ್ಣುವೇ ಆ ಶಬ್ದಗಳಿಂದ ವಾಚ್ಯನಾಗಿರುವನು. ಚಮಸಶಬ್ದವು ಸೋಮಪಾತ್ರದಲ್ಲಿ ಪ್ರಸಿದ್ಧವಾಗಿದ್ದರೂ ಮುಖ್ಯವೃತ್ತಿಯಿಂದ ಶಿರೋವಾಚಿಯಾಗುತ್ತದೆ. ಅದೇರೀತಿ ಅವ್ಯಕ್ತಾದಿಶಬ್ದಗಳೂ ಅನ್ಯತ್ರ ಪ್ರಸಿದ್ಧವಾಗಿದ್ದರೂ ಶ್ರುತಿಸಿದ್ಧನಾದ ವಿಷ್ಣುವನ್ನೇ ಹೇಳುತ್ತದೆ. ಇದನ್ನು ಶಬ್ದೈಃ ಎಂಬುದರಿಂದ ಆಚಾರ್ಯರು ತೋರಿಸಿದ್ದಾರೆ.

# ಜ್ಯೋತಿರುಪಕ್ರಮಾಧಿಕರಣ

## ॥ ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತ ಏಕೇ ಓಂ ॥ 1-4-10 ॥

'ಜ್ಯೋತಿಷಾ ಯಜೇತ' ಮುಂತಾದ ವಾಕ್ಯಗಳಲ್ಲಿ ಹೇಳಲ್ಪಟ್ಟ ಜ್ಯೋತಿರಾದಿಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವೇ ಹೊರತು ಕರ್ಮಾಮುಂತಾದವುಗಳಲ್ಲ. ಏಕೆಂದರೆ ಕೆಲವು ಶಾಖಿಗಳು ವಿಷ್ಣುವನ್ನು ಸರ್ವಶಬ್ದವಾಚ್ಯನೆಂದು ಪಠಿಸುತ್ತಾರೆ. 'ಏಷ ಇಮಂ ಅಭ್ಯಾರ್ಚತ' ಎಂದು ಆರಂಭಿಸಿ 'ತಾ ವಾ ಏತಾಃ ಸರ್ವಾ ಋಚಃ' ಎಂಬುದಾಗಿ ಸರ್ವಶಬ್ದವಾಚ್ಯತ್ವವನ್ನು ಸಮರ್ಥಿಸಲಾಗಿದೆ.

**ಅಣುಭಾಷ್ಯ:-** 'ಕರ್ಮವಾಕ್ಯೈಶ್ಚ ವಾಚ್ಯಃ'

**ಭಾವಾರ್ಥ:-** ಕರ್ಮಪ್ರತಿಪಾದಕವಾದ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಮುಂತಾದ ವಾಕ್ಯಗಳಿಂದಲೂ ವಿಷ್ಣುವೇ ವಾಚ್ಯನಾಗಿದ್ದಾನೆ. ಕರ್ಮಾಂಗವಾದ ವಸ್ತುವನ್ನು ಬೋಧಿಸುವ ಸ್ರುಕ್-ಸ್ರುವಾದಿ ಪದಗಳಿಂದಲೂ, ಕ್ರಮ, ದೇಶ, ಕಾಲ, ಅಧಿಕಾರಿ ಮೊದಲಾದವುಗಳಿಗೆ ವಾಚಕಗಳಾದ ಶಬ್ದಗಳಿಂದಲೂ ಪರಮಮುಖ್ಯವೃತ್ತಿಯಿಂದ ವಿಷ್ಣುವೇ ವಾಚ್ಯನಾಗಿದ್ದಾನೆ. ಇದನ್ನು 'ವಾಚ್ಯೈಶ್ಚ' ಎಂಬಲ್ಲಿರುವ 'ಚ'ಶಬ್ದದಿಂದ ಸೂಚಿಸಿದ್ದಾರೆ. 'ತಾ ವಾ ಏತಾಃ ಸರ್ವಾ ಋಚಃ, ಸರ್ವೇ ವೇದಾಃ, ಸರ್ವೇ ಘೋಷಾ ಏಕೈವ ವ್ಯಾಹೃತಿಃ' ಮುಂತಾದ ಶ್ರುತಿಗಳು ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವನ್ನು ತಿಳಿಸುತ್ತಿವೆ.

# ನ ಸಂಖ್ಯೋಪಸಂಗ್ರಹಾಧಿಕರಣ

## ॥ ಓಂ ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ ಓಂ ॥ 1-4-12 ॥

'ಯಸ್ಮಿನ್ ಪಂಚಪಂಚಜನಾಃ' ಎಂಬ ಶ್ರುತಿಯಲ್ಲಿರುವ ಪಂಚಜನಶಬ್ದವು ಪರಮಮುಖ್ಯವೃತ್ತಿಯಿಂದ ವಿಷ್ಣುವಾಚಕವೇ ಆಗಿದೆ. ಪಂಚೇಂದ್ರಿಯಗಳನ್ನು ಆ ಶಬ್ದವು ಹೇಳುವುದಿಲ್ಲ. ವಿಷ್ಣುವೇ ಪ್ರತಿಶರೀರದಲ್ಲೂ ಪ್ರಾಣಾದಿಪಂಚಗಳ ನಿಯಮನಕ್ಕಾಗಿ ಬಹುರೂಪಗಳನ್ನು ಧರಿಸಿರುವನು. ಆದ್ದರಿಂದ ಬಹುವಚನಾಂತ ಶಬ್ದಗಳಿಂದ ವಾಚ್ಯನಾದರೂ ವಿರೋಧವಿಲ್ಲ. 'ಯಸ್ಮಿನ್ ಪಂಚಪಂಚಜನಾಃ'

ಎಂಬಲ್ಲಿ ಆಧಾರ-ಆಧೇಯಭಾವವು ಶ್ರುತವಾಗಿದೆ. ಇದೂ ಬ್ರಹ್ಮನಲ್ಲಿ ವಿರುದ್ಧವಲ್ಲ. ಏಕೆಂದರೆ, 'ಯಸ್ಮಿನ್' ಎಂಬಲ್ಲಿ ಆಧಾರವಾಗಿ ಪ್ರತಿಪಾದಿತವಾದ ವಿಷ್ಣುವಿನ ರೂಪಕ್ಕಿಂತಲೂ 'ಜನಾಃ' ಎಂಬಲ್ಲಿ ಆಧೇಯವಾಗಿ ಪ್ರತಿಪಾದಿತರೂಪವು ಬೇರೆಯಾಗಿದೆ.

**ಅಣುಭಾಷ್ಯ:-** 'ಏಕೋಽಮಿತಾತ್ಮಕಃ'

**ಭಾವಾರ್ಥ:-** 'ಪ್ರಾಣಸ್ಯ ಪ್ರಾಣಃ ಚಕ್ಷುಷಃ ಚಕ್ಷುಃ' ಎಂಬ ಈ ಶ್ರುತಿಯು ಪ್ರಾಣಾದಿಗಳಲ್ಲಿ ಐದು ರೂಪದಿಂದ ಭಗವಂತನೇ ನಿಯಾಮಕನಾಗಿದ್ದಾನೆಂದು ಹೇಳುತ್ತಿದೆ. ಈ ನಿಯಾಮಕತ್ವವು ವಿಷ್ಣುವಿನ ಧರ್ಮವು. ಆದ್ದರಿಂದ ಪಂಚಜನ ಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆ. ಆಧಾರಾಧೇಯಭಾವವು ಭಗವಂತನಿಗೆ ರೂಪಬಹುತ್ವದಿಂದ ಯುಕ್ತವೆಂದು 'ಅಮಿತಾತ್ಮಕಃ' ಎಂಬುದರಿಂದಲೇ ಸಮರ್ಥಿಸಿದ್ದಾರೆ. ಶರೀರಾದಿಗಳಿಗೆ ಆಧಾರಾಧೇಯಭಾವವಿರುವುದರಿಂದ ಆಯಾಯಾ ಭಗವಂತನ ರೂಪಗಳೂ ಆಧಾರಾಧೇಯಭಾವವನ್ನು ಹೊಂದಿದೆ. ಸ್ವಗತಭೇದರಹಿತವಾದರೂ ಪ್ರತಿಶರೀರದಲ್ಲೂ ಪ್ರಾಣಾದಿಪಂಚಜನರ ನಿಯಮನಕ್ಕಾಗಿ ಬಹುರೂಪಗಳನ್ನು ಧರಿಸಿರುವನು. ಹೀಗೆ ಒಬ್ಬನೇ ಆದ ವಿಷ್ಣುವಿನಲ್ಲಿ ಬಹುತ್ವವು ಉಪಪನ್ನವಾಗುವುದರಿಂದ ಬಹುವಚನಾಂತಶಬ್ದಗಳಿಂದಲೂ ವಾಚ್ಯನಾಗುವನು. 'ಅಮಿತರೂಪವಾನ್' ಎಂದು ಹೇಳದೇ 'ಅಮಿತಾತ್ಮಕಃ' ಎಂದು ಹೇಳಿರುವುದರಿಂದ ಅವನಿಗೂ ಅವನ ರೂಪಾದಿಗಳಿಗೂ ಭೇದವಿಲ್ಲವೆಂದು ಸೂಚಿಸಿದ್ದಾರೆ. 'ಅಮಿತಾತ್ಮಕಃ' ಎಂಬಲ್ಲಿ ಸುಖ ಎಂಬ ಅರ್ಥವುಳ್ಳ 'ಕ'ಶಬ್ದದಿಂದ ಯಾವರೂಪದಲ್ಲೂ ದುಃಖಸ್ಪರ್ಶವೇ ಇಲ್ಲ ಕೇವಲ ಸುಖರೂಪನಾದವನು ಎಂದು ತಿಳಿಸಿದ್ದಾರೆ.

## ಕಾರಣತ್ವೇನ ಚಾಕಾಶಾಧಿಕರಣಮ್

**II ಓಂ ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ ಓಂ II**

**1-4-15 II**

ಆಕಾಶ-ವಾಯು ಮುಂತಾದ ಶಬ್ದಗಳಿಂದ ಪರಮಾತ್ಮನೇ ವಾಚ್ಯನಾದರೆ

'ಆತ್ಮನ ಆಕಾಶಸ್ಸಂಭೂತಃ ಆಕಾಶಾದ್ ವಾಯುಃ' ಮುಂತಾದ ಶ್ರುತಿಗಳಿಂದ ಆತ್ಮ ಕಾರಣ ಹಾಗೂ ಅವನೇ ಕಾರ್ಯ ಎಂದಾಗಬೇಕಾಗುತ್ತದೆ ಎಂಬ ಆಕ್ಷೇಪವನ್ನು ಇಲ್ಲಿ ಪರಿಹರಿಸಿದ್ದಾರೆ. ಪರಮಾತ್ಮನು ಕಾರ್ಯ ಮತ್ತು ಕಾರಣ ಎರಡು ವಸ್ತುಗಳಲ್ಲೂ ತಾನೇ ಅಭಿವ್ಯಕ್ತನಾಗುತ್ತಾನೆ. 'ಸ ಯೋಽತೋಽಶ್ರುತಃ' ಎಂಬ ಶ್ರುತಿಯಲ್ಲಿ ಅವಿದಿತತ್ವಾದಿಪ್ರಕಾರದಿಂದ ಹೇಳಲ್ಪಟ್ಟ ಪರಮಾತ್ಮನೇ 'ಯೋ ವಾಯೌ ತಿಷ್ಠನ್ ಯ ಆಕಾಶೇ ತಿಷ್ಠನ್' ಎಂದು ಆಕಾಶಾದಿಗಳಲ್ಲಿ ಇರುವನೆಂದು ಹೇಳಲ್ಪಟ್ಟಿದ್ದಾನೆ. ಆದ್ದರಿಂದ ಆಕಾಶ-ವಾಯು ಮುಂತಾದ ಶಬ್ದಗಳು ಪರಮಮುಖ್ಯವೃತ್ತಿಯಿಂದ ವಿಷ್ಣುಬೋಧಕವೇ ಆಗಿದೆ.

**ಅಣುಭಾಷ್ಯ:- 'ಅವಾಂತರಂ ಕಾರಣಂ ಚ'**

**ಭಾವಾರ್ಥ:-** 'ಆತ್ಮನ ಆಕಾಶಃ ಸಂಭೂತಃ ಆಕಾಶಾದ್ವಾಯುಃ' ಮುಂತಾದ ಶ್ರುತಿಯಲ್ಲಿರುವ ಆಕಾಶ-ವಾಯು ಮುಂತಾದ ಎಲ್ಲ ಶಬ್ದಗಳೂ ವಿಷ್ಣುವಾಚಕಗಳೇ ಆಗಿವೆ. ಮೂಲಕಾರಣ ಹಾಗು ಅವಾಂತರಕಾರಣ ಎರಡೂ ಅವನೇ ಆಗಿದ್ದಾನೆ. ಕಾರಣವಾದ ಆಕಾಶದಲ್ಲಿ ತಾನೇ ಅಭಿವ್ಯಕ್ತನಾಗಿದ್ದು ಕಾರ್ಯವಾದ ವಾಯುವಿನಲ್ಲಿ ಕಾರ್ಯರೂಪದ ಅಭಿವ್ಯಕ್ತಿಗೆ ಕಾರಣನಾಗುವನು. ಹೀಗೆ ಮೂಲಕಾರಣನೂ ಅವಾಂತರಕಾರಣನೂ ಆಗಿರುವುದರಿಂದ ಕಾರ್ಯ-ಕಾರಣವಾಚಕವಾದ ಎಲ್ಲ ಶಬ್ದಗಳಿಂದಲೂ ವಿಷ್ಣುವೇ ಪರಮಮುಖ್ಯವೃತ್ತಿಯಿಂದ ವಾಚ್ಯನಾಗಿರುವನು.

## ಸಮಾಕರ್ಷಾಧಿಕರಣ

### ॥ ಓಂ ಸಮಾಕರ್ಷಾತ್ ಓಂ ॥ 1-4-16 ॥

ಪರಮಮುಖ್ಯವೃತ್ತಿಯಿಂದ ಪರಮಾತ್ಮವಾಚಕಗಳಾದ ಶಬ್ದಗಳನ್ನೇ ಸಮಾಕರ್ಷಿಸಿ ಇತರ ಸ್ಥಳದಲ್ಲಿ ವ್ಯವಹಾರಕ್ಕಾಗಿ ಈಶ್ವರನೇ ಸಂಕೇತವನ್ನು ಮಾಡಿರುವುದರಿಂದ ಜಗತ್ತಿನ ವ್ಯವಹಾರಕ್ಕೆ ಏನೂ ಬಾಧಕವಿಲ್ಲ.

**ಅಣುಭಾಷ್ಯ:- 'ಕರ್ಮವಾಕ್ಯೈಶ್ಚ ವಾಚ್ಯಃ'**

**ಭಾವಾರ್ಥ:-** ಕರ್ಮಾದಿಪ್ರತಿಪಾದಕಗಳಾದ ಸರ್ವಶಬ್ದಗಳಿಂದಲೂ ಪರಮಮುಖ್ಯವೃತ್ತಿಯಿಂದ ವಿಷ್ಣುವೇ ವಾಚ್ಯನಾಗಿದ್ದಾನೆ. 'ಪರಸ್ಯ ಶಬ್ದಾಃ

ಸಮಾಕೃಷ್ಟೇತರೇಷ್ವಪಿ' ಎಂಬ ಪ್ರಮಾಣವಾಕ್ಯದಂತೆ ಪರಮಮುಖ್ಯವೃತ್ತಿಯಿಂದ ಸರ್ವಶಬ್ದಗಳು ಭಗವದ್ವಾಚಕವಾದರೂ ಮುಖ್ಯವೃತ್ತಿಯಿಂದ ಇತರಪದಾರ್ಥಗಳನ್ನೂ ಹೇಳುತ್ತವೆ.

# ಪ್ರಕೃತ್ಯಧಿಕರಣ

## ॥ ಓಂ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಓಂ ॥ I ॥ 1-4-24 ॥

ಕೇವಲ ಪುಲ್ಲಿಂಗಶಬ್ದಗಳಿಂದ ವಾಚ್ಯನಾಗದೆ ಸ್ತ್ರೀಲಿಂಗಶಬ್ದಗಳಿಂದಲೂ ವಿಷ್ಣುವೇ ವಾಚ್ಯನಾಗಿದ್ದಾನೆ. 'ಹಂತ್ಯೈತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ' ಎಂಬ ಶ್ರುತಿಯಲ್ಲಿ ವಿಷ್ಣುವೇ ಸರ್ವಶಬ್ದವಾಚ್ಯನೆಂದು ಪ್ರತಿಜ್ಞೆಮಾಡಿ 'ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಮಭಿವಿಶಂತಿ ಏವಮೇವೈತಾನಿ ನಾಮಾನಿ' ಎಂದು ದೃಷ್ಟಾಂತವನ್ನು ನೀಡಲಾಗಿದೆ. ಅದಲ್ಲದೆ ಭಗವಂತನಿಗೆ ಸ್ತ್ರೀರೂಪವೂ ಇದೆ. ಇದರಿಂದ ಸ್ತ್ರೀಲಿಂಗಶಬ್ದಗಳಿಂದಲೂ ವಿಷ್ಣುವು ವಾಚ್ಯನೆಂದು ತಿಳಿಯುತ್ತದೆ.

**ಅಣುಭಾಷ್ಯ:- 'ಪ್ರಕೃತಿಃ'**

ಭಾವಾರ್ಥ:- 'ಸೈಷಾ ಪ್ರಕೃತಿಃ' ಮುಂತಾದ ಶ್ರುತಿಯಲ್ಲಿ ಹೇಳಿದ ಪ್ರಕೃತಿ ಹಾಗೂ ಇತರ ಎಲ್ಲ ಸ್ತ್ರೀಲಿಂಗಶಬ್ದಗಳಿಂದ ಪರಮಾತ್ಮನೇ ವಾಚ್ಯನಾಗಿದ್ದಾನೆ. 'ಪ್ರಕೃಷ್ಟವಾದ ಕೃತಿಯುಳ್ಳವನು' ಎಂಬ ಪ್ರಕೃತಿಶಬ್ದದ ಅರ್ಥವೂ ಅವನಲ್ಲೇ ಇದೆ.

**ಅಣುಭಾಷ್ಯ:- 'ಶೂನ್ಯಮೇವ ಚ'**

**ಭಾವಾರ್ಥ:-** ಶೂನ್ಯ, ತುಚ್ಛ, ಅಸತ್ ಮುಂತಾದ ನಿಷೇಧಾರ್ಥವನ್ನು ನೀಡುವ ಎಲ್ಲ ಶಬ್ದಗಳೂ ವಿಷ್ಣುವನ್ನೇ ಪ್ರತಿಪಾದಿಸುತ್ತಿವೆ. 'ಏಷ ಹ್ಯೇವ ಶೂನ್ಯಃ.....' ಮುಂತಾದ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. 'ಶಮೂನಂ ಕುರುತೇ ಯಸ್ಮಾತ್....' ಇತರರ ಸುಖವು ಪರಮಾತ್ಮನ ಸುಖಕ್ಕಿಂತ

ಊನವಾಗಿರುತ್ತದೆ ಎಂದೂ ಶ್ರುತಿ-ಸ್ಮೃತಿಗಳು ಶೂನ್ಯಶಬ್ದದ ಅರ್ಥವನ್ನು ಭಗವಂತನಲ್ಲಿ ಪ್ರತಿಪಾದಿಸುತ್ತಿವೆ. ಆ ಶಬ್ದಗಳ ಪ್ರವೃತ್ತಿನಿಮಿತ್ತವು ಭಗವಂತನ ಅಧೀನ. ಆದ್ದರಿಂದ ಆ ಶಬ್ದಗಳಿಂದ ವಿಷ್ಣುವೇ ವಾಚ್ಯನಾಗಿದ್ದಾನೆ. ಚ, ವೈ, ತು, ಹಿ ಇವೇ ಮುಂತಾದ ನಿಪಾತಗಳಿಂದಲೂ ವಿಷ್ಣುವೇ ವಾಚ್ಯನೆಂದು 'ಚ'ಶಬ್ದದ ಅರ್ಥ.

'ಪ್ರಕೃತಿಃ ವಾಸನೇತ್ಯೇವ ತವೇಚ್ಛಾನಂತ ಕಥ್ಯತೇ' ಎಂಬ ವಚನದಂತೆ ಪ್ರಕೃತಿ ಎಂದರೆ ಪರಮಾತ್ಮನ ಇಚ್ಛೆ. ಅದು ಪರಮಾತ್ಮನ ಸ್ವರೂಪವೇ ಆಗಿದೆ. ಆದ್ದರಿಂದಲೂ ಪರಮಾತ್ಮನು ಪ್ರಕೃತಿಶಬ್ದವಾಚ್ಯನಾಗುವನು.

## ಏತೇನ ಸರ್ವೇ ವ್ಯಾಖ್ಯಾತಾಧಿಕರಣ

### ।। ಓಂ ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ ಓಂ ।। 1-4-29 ।।

ಅಧೀನತ್ವವೇ ಮೊದಲಾದ ಹಿಂದೆ ಹೇಳಿದ ಯುಕ್ತಿಗಳಿಂದ ಶೂನ್ಯ, ಅಸತ್ ಮುಂತಾದ ಎಲ್ಲ ಶಬ್ದಗಳೂ ವಿಷ್ಣುವಾಚಕಗಳೇ ಆಗಿವೆ ಎಂದು ಪ್ರತಿಪಾದಿಸಲ್ಪಟ್ಟಿದೆ.

# ॥ ದ್ವಿತೀಯೋಽಧ್ಯಾಯಃ ॥

# (ಅವಿರೋಧಾಧ್ಯಾಯಃ)

## ಪ್ರಥಮಪಾದ

## ಸ್ಮೃತ್ಯಧಿಕರಣ

### ॥ ಓಂ ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಂಗಾತ್ ಓಂ ॥ 2-1-1 ॥

ಶ್ರುತಿಗಳು ವಿಷ್ಣುವನ್ನೇ ಜಗತ್ಕಾರಣ ಎಂದಾಗ ನಿರವಕಾಶವಾದ ಪಾಶುಪತಾದಿ ಸ್ಮೃತಿಗಳ ವಿರೋಧವು ಬರುತ್ತದೆ. ಆದ್ದರಿಂದ ಶ್ರುತಿಗಳು ಅಪ್ರಮಾಣವಾಗುತ್ತವೆ ಎಂದು ಆಶಂಕಿಸಬಾರದು. ಪಂಚರಾತ್ರಾದಿವೈಷ್ಣವ ಸ್ಮೃತಿಗಳೂ ನಿರವಕಾಶವಾಗಿವೆ. ಹೀಗೆ ಶ್ರುತ್ಯನುಸಾರಿಯಾದ ಪಂಚರಾತ್ರಾದಿ ವೈಷ್ಣವ ಸ್ಮೃತಿಗಳ ವಿರೋಧವಿರುವುದರಿಂದ ಪಾಶುಪತಾದಿಸ್ಮೃತಿಗಳೇ ಅಪ್ರಮಾಣವಾಗುತ್ತವೆ.

**ಅಣುಭಾಷ್ಯ:- 'ಶ್ರೌತಸ್ಮೃತಿವಿರುದ್ಧತ್ವಾತ್ ಸ್ಮೃತಯೋ ನ ಗುಣಾನ್ ಹರೇಃ । ನಿಷೇದ್ಧುಂ ಶಕ್ನುಯುರ್ವೇದಾ...'**

**ಭಾವಾರ್ಥ:-** ಪಾಶುಪತಾದಿಸ್ಮೃತಿಗಳು ಭಗವಂತನ ಜಗತ್ಕಾರಣತ್ವಾದಿ ಗುಣಗಳನ್ನು ನಿಷೇಧಿಸಲು ಸಮರ್ಥವಲ್ಲ. ಆ ಪಾಶುಪತಾದಿಸ್ಮೃತಿಗಳು ಶ್ರುತ್ಯನುಸಾರಿಯಾದ ಪಂಚರಾತ್ರಾದಿ ವೈಷ್ಣವಸ್ಮೃತಿಗಳಿಂದ ವಿರುದ್ಧವಾಗಿವೆ. ಪಂಚರಾತ್ರಾದಿಸ್ಮೃತಿಗಳು ಸರ್ವಜ್ಞನಾದ ವಿಷ್ಣುವಿನ ಪ್ರತ್ಯಕ್ಷಮೂಲವಾಗಿವೆ. ಶ್ರುತಿಸಂವಾದಿಗಳೂ ಆಗಿವೆ. ಆದ್ದರಿಂದ ವೈಷ್ಣವಸ್ಮೃತಿಗಳೇ ಪ್ರಬಲ. ಪಾಶುಪತಾದಿಸ್ಮೃತಿಗಳು ಶ್ರುತಿಸಂವಾದರಹಿತವಾಗಿವೆ. ಆದ್ದರಿಂದ ಅವುಗಳು ದುರ್ಬಲ. ಈ ಎಲ್ಲ ಕಾರಣಗಳಿಂದ ಪಾಶುಪತಾದಿಸ್ಮೃತಿಗಳೇ ಅಪ್ರಮಾಣ ವಾಗುತ್ತವೆ.

**ವಿಶೇಷವಿಚಾರ:-** 'ಶ್ರುತಯಃ' ಎಂಬ ಶಬ್ದವನ್ನು ಪ್ರಯೋಗಿಸದೇ 'ವೇದಾಃ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಇದರಿಂದ 'ವೇದಾ ಏವ ಹ್ಯೇನಂ ವೇದಯಂತಿ ತಸ್ಮಾದಾಹುರ್ವೇದಾಃ' ಎಂಬ ಪ್ರಮಾಣವಾಕ್ಯದಂತೆ ವೇದಗಳು (ಯಥಾರ್ಥ)ಜ್ಞಾನಜನಕವಾಗಿವೆ. ವಿಪರೀತಜ್ಞಾನಜನಕವಾಗಿಲ್ಲ. ಆದ್ದರಿಂದ ವೇದಗಳು ಪರಮಪ್ರಮಾಣ ಎಂದು ತಿಳಿಸಿದ್ದಾರೆ.

# ನವಿಲಕ್ಷಣತ್ವಾಧಿಕರಣ

## || ಓಂ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ || 2-1-4 ||

ವೇದಗಳಲ್ಲಿ ಹೇಳಿದ ಕರ್ಮಾನುಷ್ಠಾನ ಮಾಡಿದರೂ ಫಲವು ಉಪಲಬ್ಧವಾಗುತ್ತಿಲ್ಲ. ಆದ್ದರಿಂದ ವೇದಗಳೂ ಅಪ್ರಮಾಣ ಎನ್ನಬಾರದು. ವೇದಗಳು ಅಪೌರುಷೇಯ. 'ವಾಚಾ ವಿರೂಪ ನಿತ್ಯಯಾ' ಇತ್ಯಾದಿ ಶ್ರುತಿ-ಸ್ಮೃತಿಗಳೇ ಈ ವಿಷಯದಲ್ಲಿ ಆಧಾರ. ಫಲದೊರಕದಿರಲು ಕಾರಣ ಕರ್ತ್ರಾದಿಗಳ ವೈಗುಣ್ಯ. ಅನಿತ್ಯವಾದ ಪಾಶುಪತಾದಿ ಸ್ಮೃತಿಗಳಿಗಿಂತ ವೇದವು ವಿಲಕ್ಷಣವಾಗಿದೆ. ಆದ್ದರಿಂದ ವೇದವು ಅಪ್ರಮಾಣವಾಗುವುದಿಲ್ಲ.

**ಅಣುಭಾಷ್ಯ:- '(ವೇದಾಃ) ನಿತ್ಯತ್ವಾತ್ ಮಾನಮುತ್ತಮಮ್'**

**ಭಾವಾರ್ಥ:-** ಇತಿಹಾಸ, ವೈಷ್ಣವ ಸ್ಮೃತಿಗಳು ಇವುಗಳಲ್ಲಿ ಹೇಳಿದ ಅರ್ಥವು ಮಾತ್ರ ನಿತ್ಯವಾಗಿದೆ. ಆದರೆ ಋಗಾದಿವೇದಗಳಲ್ಲಿ ಅರ್ಥ ಮತ್ತು ಶಬ್ದ ಎರಡೂ ನಿತ್ಯವಾದ್ದರಿಂದ 'ಉತ್ತಮಂ ಮಾನಮ್' ಪರಮಪ್ರಮಾಣ ಎಂದಿದ್ದಾರೆ. ಪುರುಷನಲ್ಲಿರುವ ಅಜ್ಞಾನವಿಪ್ರಲಂಭಕತ್ವಾದಿ ದೋಷದಿಂದಾಗಿ ಅವನಿಂದ ರಚಿತವಾದ ವಾಕ್ಯವೂ ದೋಷಯುಕ್ತವಾಗುತ್ತದೆ. ಆದರೆ ವೇದವು ಅಪೌರುಷೇಯ. 'ನಿತ್ಯಯಾಽನಿತ್ಯಯಾ ಸ್ತೌಮಿ', 'ವಾಚಾ ವಿರೂಪ ನಿತ್ಯಯಾ', 'ನಿತ್ಯಾ ವೇದಾಃ' ಮುಂತಾದ ಶ್ರುತಿ-ಸ್ಮೃತಿಗಳೇ ವೇದವಾಕ್ಯಗಳನ್ನು ಹೀಗೆ ನಿತ್ಯವೆನ್ನುತ್ತಿವೆ. ಇದರಿಂದ ವೇದವು ಅಪೌರುಷೇಯವೆಂದು ಸಿದ್ಧವಾಗುತ್ತದೆ. ಹೀಗೆ ಅಪೌರುಷೇಯವಾದ್ದರಿಂದ ವೇದಗಳು ಪರಮಪ್ರಮಾಣ.

## ಅಭಿಮಾನ್ಯಧಿಕರಣ

### ॥ ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾಽನುಗತಿಭ್ಯಾಮ್ ಓಂ ॥ 2-1-6 ॥

'ಆಪೋಽಬ್ರುವನ್', 'ಮೃದಬ್ರವೀತ್' ನೀರು ಮಾತನಾಡಿದವು, ಮಣ್ಣು ಮಾತನಾಡಿತು. ಇಂತಹ ಯುಕ್ತಿವಿರುದ್ಧವಾದ ವಚನಗಳು ವೇದದಲ್ಲಿರುವುದರಿಂದ ವೇದವೂ ಅಪ್ರಮಾಣ ಎಂದು ಆಶಂಕಿಸಬಾರದು. ಆಪಃ, ಮೃದ್ ಮುಂತಾದ ಶಬ್ದಗಳೆಲ್ಲವೂ ಆಯಾಯಾ ಅಭಿಮಾನಿದೇವತೆಗಳನ್ನು ಹೇಳುತ್ತಿವೆ. 'ನೀರಿನ ಅಭಿಮಾನಿದೇವತೆ ಹಾಗು ಮಣ್ಣಿನ ಅಭಿಮಾನಿ ದೇವತೆ ಮಾತನಾಡಿದರು' ಎಂದು ಆ ಶ್ರುತಿಯ ಅರ್ಥ.

**ಅಣುಭಾಷ್ಯ:- 'ದೇವತಾವಚನಾದಾಪೋ ವದಂತೀತ್ಯಾದಿಕಂ ವಚಃ । ನಾಯುಕ್ತವಾದೀ...'**

**ಭಾವಾರ್ಥ:-** 'ಆಪೋಽಬ್ರುವನ್', 'ಮೃದಬ್ರವೀತ್' ಮುಂತಾದ ಶ್ರುತಿಗಳಲ್ಲಿರುವ ಆಪಃ, ಮೃತ್ ಮುಂತಾದ ಶಬ್ದಗಳು ಅಭಿಮಾನಿದೇವತೆಗಳನ್ನು ಹೇಳುತ್ತಿವೆ. ಆದ್ದರಿಂದ ವೇದವಾಕ್ಯಗಳಿಗೆ ಯುಕ್ತಿವಿರೋಧವಿಲ್ಲ. ಅಪ್ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವಾದ ಅಪ್ತ್ವಾದಿಧರ್ಮಗಳು ದೇವತೆಗಳ ಅಧೀನವಾಗಿವೆ. ಆದ್ದರಿಂದ ಮುಖ್ಯವೃತ್ತಿಯಿಂದಲೇ ಆ ಶಬ್ದಗಳು ಆಯಾಯಾ ದೇವತೆಗಳನ್ನೇ ಹೇಳುತ್ತಿವೆ. ಇದನ್ನು ಸೂಚಿಸಲು 'ದೇವತಾವಚನಾತ್' ಎಂಬಲ್ಲಿ ವಚನ ಶಬ್ದವನ್ನು ಪ್ರಯೋಗಿಸಿದ್ದಾರೆ.

**ವಿಶೇಷವಿಚಾರ:-** ಚೇತನವಚನಾತ್ ಎಂದು ಹೇಳದೇ 'ದೇವತಾವಚನಾತ್' ಎಂದು ಹೇಳಿರುವುದರಿಂದ ಆಯಾಯಾವಸ್ತುಗಳ ಮೇಲೆ ದೇವತೆಗಳ ಸ್ವಾಮಿತ್ವವಿದೆ; ಆದ್ದರಿಂದ ಆ ಶಬ್ದಗಳು ದೇವತಾವಾಚಕಗಳಾಗಿವೆ ಎಂಬುದನ್ನೂ ಸೂಚಿಸಿದ್ದಾರೆ.

## ಅಸದಧಿಕರಣ

### ॥ ಓಂ ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ಓಂ ॥ 2-1-8 ॥

'ಅಸದ್ ವಾ ಇದಮಗ್ರ ಆಸೀತ್' ಶ್ರುತಿಯು ಅಸತ್ತನ್ನೇ ಜಗತ್ತಿಗೆ ಕಾರಣ ಎನ್ನುತ್ತಿದೆ. ಆದ್ದರಿಂದ ವಿಷ್ಣು ಜಗತ್ತಿನ ಕಾರಣನಲ್ಲ ಎಂದು ಆಶಂಕಿಸಬಾರದು. ಅಸತ್ ಸ್ವರೂಪರಹಿತವಾದುದು. ಅದು ಜಗತ್ತಿಗೆ ಕಾರಣವಾಗಲು ಸಾಧ್ಯವಿಲ್ಲ. ಶಶವಿಷಾಣವು ಜಗತ್ತಿಗೆ ಕಾರಣವಾಗಲು ಸಾಧ್ಯವಿಲ್ಲ. ಶ್ರುತಿಯಲ್ಲಿರುವ ಅಸತ್ ಶಬ್ದವು ವಿಷ್ಣುವಾಚಕವಾಗಿದೆ. ಆದ್ದರಿಂದ ವಿಷ್ಣುವಿಗೇ ಜಗತ್ಕಾರಣತ್ವ.

**ಅಣುಭಾಷ್ಯ:- 'ಅಸನ್ನೈವ ಕಾರಣಂ ದೃಶ್ಯತೇ ಕ್ವಚಿತ್'**

**ಭಾವಾರ್ಥ:-** ಅಸತ್ತಿಗೆ ಜಗತ್ಕಾರಣತ್ವವು ಅಪ್ರಾಮಾಣಿಕ. ಶಶವಿಷಾಣಾದಿಗಳು ಕಾರಣವಾಗಿರುವುದು ಯಾವ ದೇಶ-ಕಾಲಗಳಲ್ಲೂ ಕಂಡಿಲ್ಲ.

ಅಸತ್ ಜಗತ್ತಿಗೆ ಕಾರಣ ಎಂಬ ವಿಷಯದಲ್ಲಿ ಶ್ರುತಿಯೇ ಪ್ರಮಾಣವಾಗಿದೆ ಎಂಬ ಆಕ್ಷೇಪವನ್ನು ಪರಿಹರಿಸುತ್ತಿದ್ದಾರೆ:-

**ಅಣುಭಾಷ್ಯ:- 'ಅಸಜ್ಜೀವಪ್ರಧಾನಾದಿಶಬ್ದಾ ಬ್ರಹ್ಮೈವ ನಾಪರಮ್ । ವದಂತಿ ಕಾರಣತ್ವೇನ ಕ್ವಾಪಿ...'**

ಭಾವಾರ್ಥ:- 'ಅಸದ್ವಾ ಇದಮಗ್ರ ಆಸೀತ್', 'ಜೀವಾತ್ ಭವಂತಿ ಭೂತಾನಿ'. 'ಪ್ರಧಾನಾದಿದಮುತ್ಪನ್ನಂ ಪ್ರಧಾನಮುಪತಿಷ್ಠತೇ' ಇವೇ ಮುಂತಾದ ಅಸತ್, ಜೀವ, ಪ್ರಧಾನ ಎಂದೆನ್ನುವ ವಾಕ್ಯಗಳು ಬ್ರಹ್ಮನನ್ನೇ ಜಗತ್ಕಾರಣನೆಂದು ಹೇಳುತ್ತಿವೆ. ಬೇರೆ ಯಾವುದನ್ನೂ ಜಗತ್ಕಾರಣವೆಂದು ಪ್ರತಿಪಾದಿಸುವುದಿಲ್ಲ.

**ಅಣುಭಾಷ್ಯ:- 'ಪೂರ್ಣಗುಣಃ'**

ಅಸದಾದಿಶಬ್ದಗಳು ಹೇಗೆ ಬ್ರಹ್ಮವಾಚಕಗಳಾಗುತ್ತವೆ ಎಂಬ ಶಂಕೆಯನ್ನು ಪರಿಹರಿಸಲು ಪೂರ್ಣವಾದ ಗುಣವುಳ್ಳವನು ಎಂದಿದ್ದಾರೆ. ಅಸತ್ ಮುಂತಾದ ಶಬ್ದಗಳ ಪ್ರವೃತ್ತಿಗೆ ನಿಮಿತ್ತವಾದ ಗುಣಗಳಿಂದ ಪೂರ್ಣನಾದವನು ಎಂದರ್ಥ. ಅಸದಾದಿಶಬ್ದಗಳಿಂದ ಅವನು ವಾಚ್ಯನಲ್ಲದಿದ್ದರೆ ಗುಣಪೂರ್ಣನೇ ಆಗಲಾರ.

## ಭೋಕ್ತ್ರಧಿಕರಣ

**॥ ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್ ಓಂ ॥ 2-1-14**

ಜೀವೇಶ್ವರರಿಗೆ ಅಭೇದವಿಲ್ಲ. 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯು ಸ್ಥಾನೈಕ್ಯವನ್ನು ಹೇಳುತ್ತಿದೆ. ಆದ್ದರಿಂದ ಈಶ್ವರನು ಜೀವಾಭಿನ್ನನಾದ್ದರಿಂದ ಜನ್ಮಾದಿಕಾರಣನಲ್ಲ ಎಂದು ಆಶಂಕಿಸಬಾರದು. ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣವಾದ ಸ್ವಾತಂತ್ರ್ಯ-ಸಾರ್ವಜ್ಞಾದಿಗುಣಗಳಿಂದ ಪರಿಪೂರ್ಣನಾಗಿದ್ದಾನೆ ಭಗವಂತ. ಆದ್ದರಿಂದ ಭಿನ್ನನೇ ಆಗಿದ್ದಾನೆ.

**ಅಣುಭಾಷ್ಯ:- 'ಸರ್ವಗುಣತ್ವತಃ'**

**ಭಾವಾರ್ಥ:-** ವಿಷ್ಣುವು ಸರ್ವಜ್ಞತ್ವಾದಿ ಅನಂತಧರ್ಮಗಳಿಂದ ಪೂರ್ಣನಾಗಿದ್ದಾನೆ ಎಂದು ಶ್ರುತಿಗಳು ಪ್ರತಿಪಾದಿಸುತ್ತಿವೆ. ಜೀವನಲ್ಲಿ ಅಜ್ಞಾನ-ಪಾರತಂತ್ರ್ಯಾದಿಗಳು ಸಾಕ್ಷಿಪ್ರಮಾಣದಿಂದ ಸಿದ್ಧವಾಗಿದೆ. ಹೀಗೆ ವಿರುದ್ಧಧರ್ಮಗಳಿರುವುದರಿಂದ ಜೀವ-ಬ್ರಹ್ಮರಿಗೆ ಐಕ್ಯವನ್ನು ಹೇಳಲು ಸಾಧ್ಯವಿಲ್ಲ.

## ಆರಂಭಣಾಧಿಕರಣ

**|| ಓಂ ತದನನ್ಯತ್ವಮಾರಂಭಣಶಬ್ದಾದಿಭ್ಯಃ ಓಂ || 2-1-15 ||**

'ಕಿಂ ಸ್ವಿದಾಸೀತ್ ಅಧಿಷ್ಠಾನಮಾರಂಭಣಂ' ಎಂಬ ಈ ಶ್ರುತಿಯಲ್ಲಿ ಸೃಷ್ಟಿಯ ಆರಂಭದಲ್ಲಿ ಪರಮಾತ್ಮನ ಸೃಷ್ಟಿಕ್ರಿಯೆಗೆ ಅಧಿಷ್ಠಾನವಾಗಿ ಯಾವುದಿತ್ತು? ಎಂದು ಆಕ್ಷೇಪಿಸುವ ಶಬ್ದಗಳಿವೆ. ಇದರಿಂದ ಯಾವ ಅಧಿಷ್ಠಾನ ಉಪಾದಾನಕಾರಣಗಳೂ ಇರಲಿಲ್ಲ ಎಂದು ತಿಳಿಯುತ್ತದೆ. ಆದ್ದರಿಂದ ಪರಮಾತ್ಮನು ಸ್ವತಂತ್ರನಾಗಿ ಜಗತ್ತನ್ನು ಸೃಷ್ಟಿಸಿದನು.

**ಅಣುಭಾಷ್ಯ:- 'ಸ್ವಾತಂತ್ರ್ಯಾತ್ ಶ್ರುತಿರ್ಯದ್ ವದೇತ್ ತನ್ನ್ಯಾಯುಕ್ತಂ'**

**ಭಾವಾರ್ಥ:-**ಎಲ್ಲ ಸಾಧನಗಳಿಗೂ ಸತ್ತಾದಿಗಳನ್ನು ನೀಡುವವನು ಈಶ್ವರ. ಆದಕಾರಣ ಎಲ್ಲ ಸಾಧನಗಳೂ ಅವನ ಅಧೀನವಾಗಿವೆ. ಹೀಗೆ ಸ್ವತಂತ್ರಸಾಧನನಿರಪೇಕ್ಷವಾದದ್ದು ಅವನ ಸೃಷ್ಟಿ. ಸಾಧನಗಳಿಲ್ಲದೆ ಸೃಷ್ಟಿಮಾಡಲು ಸಮರ್ಥನಾದರೂ ಲೀಲೆಯಿಂದ ಸಾಧನಗಳನ್ನು ಸ್ವೀಕರಿಸುವನು. ಆದ್ದರಿಂದ ವಿಷ್ಣುವು ಗುಣಪೂರ್ಣನಾಗಿದ್ದಾನೆ.

## ಇತರವ್ಯಪದೇಶಾಧಿಕರಣ

### ॥ ಓಂ ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ ಓಂ ॥ 2-1-22 ॥

ಜೀವನು ಸ್ವತಂತ್ರಕರ್ತೃ ಅಲ್ಲ. ಈಶ್ವರನೇ ಸ್ವತಂತ್ರಕರ್ತೃ. ಜೀವನು ಸ್ವತಂತ್ರಕರ್ತೃವಾದಲ್ಲಿ ತನಗೆ ಹಿತವನ್ನೇ ಮಾಡುತ್ತಿದ್ದನು. ಅಹಿತವನ್ನು ತನಗೆ ಎಂದೂ ಮಾಡುತ್ತಿರಲಿಲ್ಲ. ಆದ್ದರಿಂದ ಈಶ್ವರನೇ ಸರ್ವಕರ್ತಾ.

## ಶ್ರುತ್ಯಧಿಕರಣ

### ॥ ಓಂ ಶ್ರುತೇಸ್ತು ಶಬ್ದಮೂಲತ್ವಾತ್ ಓಂ ॥ 2-1-28 ॥

ಈಶ್ವರನಿಗೆ ಹಸ್ತಪಾದಾದಿ ಅವಯವಗಳಿಲ್ಲವಾದ್ದರಿಂದ ಈಶ್ವರನು ಸರ್ವಕರ್ತೃವಾಗಲಾರ ಎಂದು ಆಶಂಕಿಸಬಾರದು. ಈಶ್ವರನಿಗೆ ಅಪ್ರಾಕೃತವಾದ ಹಸ್ತಪಾದಾದಿ ಅವಯವಗಳಿವೆ ಎಂದು ಶ್ರುತಿಗಳು ತಿಳಿಸುತ್ತಿವೆ. ಅವನು ಕೇವಲ ಶ್ರುತಿಗಳಿಂದ ತಿಳಿಯಲ್ಪಡುವವನಾಗಿದ್ದಾನೆ. ಅವನ ಶಕ್ತಿ ಅಚಿಂತ್ಯಾದ್ಭುತವಾದುದು. ಹೀಗೆ ಆಶ್ಚರ್ಯವಾದ ಗುಣಗಳಿಂದ ಪೂರ್ಣನಾಗಿದ್ದಾನೆ ಈಶ್ವರ.

**ಅಣುಭಾಷ್ಯ:- 'ನಾಯುಕ್ತಂ ತದ್ವದೇತ್ ಶ್ರುತಿಃ'**

**ಭಾವಾರ್ಥ:-** ಈಶ್ವರನು ಶ್ರುತಿಯಿಂದ ಮಾತ್ರ ಜ್ಞೇಯನಾದ್ದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ.

## ನ ಪ್ರಯೋಜನತ್ವಾಧಿಕರಣ

### ॥ ಓಂ ನ ಪ್ರಯೋಜನವತ್ವಾತ್ ಓಂ ॥ 2-1-33 ॥

ಜಗತ್ಸೃಷ್ಟಿಯಲ್ಲಿ ಈಶ್ವರನ ಪ್ರವೃತ್ತಿಯು ಪ್ರಯೋಜನೋದ್ದೇಶದಿಂದ ಅಲ್ಲ. ಮತ್ತನ ನೃತ್ತಗಾನಾದಿಲೀಲೆಗಳಂತೆ, ಅದು ಈಶ್ವರನ ಸ್ವಭಾವ. ಈಶ್ವರನು ಪೂರ್ಣವಾದ ಆನಂದಾದಿಗುಣಗಳಿಂದ ಪರಿಪೂರ್ಣನಾದವನು. ಪೂರ್ಣಗುಣನಾಗಿದ್ದರೂ ಲೋಕಾನುಗ್ರಹಕ್ಕಾಗಿ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ.

# ವೈಷಮ್ಯನೈರ್ಘೃಣ್ಯಾಧಿಕರಣ

## ॥ ಓಂ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಹಿ ದರ್ಶಯತಿ ಓಂ ॥ 2-1-36 ॥

ಕೆಲವರಿಗೆ ಸುಖ, ಕೆಲವರಿಗೆ ದುಃಖಾದಿಗಳನ್ನು ನೀಡುವುದರಿಂದ ಈಶ್ವರನಿಗೆ ವೈಷಮ್ಯಾದಿದೋಷಗಳು ಸಂಭವಿಸುತ್ತವೆ ಎನ್ನಬಾರದು. ಜೀವನ ಅನಾದಿಯಾದ ಕರ್ಮಕ್ಕನುಗುಣವಾಗಿ ಈಶ್ವರನು ಫಲ ನೀಡುವನು. ಆ ಕರ್ಮವೂ ಈಶ್ವರನ ಅಧೀನವಾಗಿದೆ.

**ಅಣುಭಾಷ್ಯ:-** **'ನಾಯುಕ್ತಂ ತದ್ ವದೇತ್ ಶ್ರುತಿಃ'**

**ಭಾವಾರ್ಥ:-** 'ಸ ಕಾರಯೇತ್ ಪುಣ್ಯಮಥಾಪಿ ಪಾಪಂ ನ ತಾವತಾ ದೋಷವಾನೀಶಿತಾऽಪಿ' ಇವೇ ಮೊದಲಾದ ಪ್ರಮಾಣವಾಕ್ಯಗಳಂತೆ ಅನಾದಿ ಯಾದ ಕರ್ಮಕ್ಕನುಗುಣವಾಗಿ ಪುಣ್ಯ-ಪಾಪಗಳನ್ನು ಮಾಡಿಸಿ ಸುಖದುಃಖಗಳನ್ನು ನೀಡುತ್ತಾನೆ. ಆದ್ದರಿಂದ ಶ್ರುತಿಯಲ್ಲಿ ಹೇಳಿರುವ ಸರ್ವಗುಣಪೂರ್ಣತೆಯು ಯುಕ್ತಿವಿರುದ್ಧವಲ್ಲ.

# ಸರ್ವಧರ್ಮೋಪಪತ್ತ್ಯಧಿಕರಣ

## ॥ ಓಂ ಸರ್ವಧರ್ಮೋಪಪತ್ತೇಶ್ಚ ಓಂ ॥ 2-1-38 ॥

ದೇವದತ್ತಾದಿಗಳಂತೆ ಈಶ್ವರನೂ ಚೇತನನಾದ್ದರಿಂದ ಗುಣಪೂರ್ಣನಲ್ಲ ಎನ್ನಬಾರದು. ದೇವದತ್ತಾದಿಗಳು ಸ್ವತಂತ್ರರಲ್ಲ. ಆದರೆ ಈಶ್ವರನು ಸ್ವತಂತ್ರ ಆದ್ದರಿಂದ ಹರಿಯು ಗುಣಪೂರ್ಣನಾಗಿದ್ದಾನೆ.

**ಅಣುಭಾಷ್ಯ:-** **'ನಾಯುಕ್ತಂ ತದ್ವದೇತ್ ಶ್ರುತಿಃ'**

**ಭಾವಾರ್ಥ:-** ಶ್ರೀಹರಿಯು ಅನಂತಗುಣಪೂರ್ಣನೆನ್ನುವುದು ಯುಕ್ತಿ ವಿರುದ್ಧವಲ್ಲ. 'ಗುಣಾಃ ಶ್ರುತಾ ಸುವಿರುದ್ಧಾಶ್ಚ' ಇವೇ ಮೊದಲಾದ ಶ್ರುತಿಗಳು ಶ್ರೀಹರಿಯನ್ನು ದೋಷರಹಿತ ಹಾಗೂ ಗುಣಪೂರ್ಣನೆಂದು ಬಣ್ಣಿಸುತ್ತಿವೆ. ಹೀಗೆ ಪೂರ್ವಪಕ್ಷಿಗಳು ಹೇಳಿದ ಯುಕ್ತಿಗಳೆಲ್ಲವೂ ಸಿದ್ಧಾಂತಿಗಳ ಶ್ರುತಿ-ಯುಕ್ತಿಗಳಿಂದ

ಬಾಧಿತವಾಗಿವೆ. ಆದಕಾರಣ ಶ್ರುತಿಯಲ್ಲಿ ಹೇಳಿದ ಪರಮಾತ್ಮನ ಜಗಜ್ಜನ್ಮಾದಿ ಕಾರಣತ್ವ ಹಾಗು ಸರ್ವಗುಣಪೂರ್ಣತ್ವಕ್ಕೆ ಯುಕ್ತಿವಿರೋಧವಿಲ್ಲ.

## ದ್ವಿತೀಯಪಾದ

**ಅಣುಭಾಷ್ಯ: 'ಭ್ರಾಂತಿಮೂಲತಯಾ ಸರ್ವಸಮಯಾನಾಮಯುಕ್ತಿತಃ । ನ ತದ್ವಿರೋಧಾದ್ ವಚನಂ ವೈದಿಕಂ ಶಂಕ್ಯತಾಂ ವ್ರಜೇತ್' ॥**

ಹನ್ನೆರಡು ಅಧಿಕರಣಗಳ ಈ ಪಾದದಲ್ಲಿ ಇತರ ಎಲ್ಲ ದರ್ಶನಗಳ ನಿರಾಕರಣೆಯನ್ನು ಮಾಡಿದ್ದಾರೆ. ವೇದವ್ಯಾಸರ ದರ್ಶನವನ್ನು ಬಿಟ್ಟು ಉಳಿದ ಎಲ್ಲ ದರ್ಶನಗಳು ಆಯಾಯಾ ದರ್ಶನಪ್ರವರ್ತಕರ ಭ್ರಮ, ಪ್ರಮಾದ, ವಿಪ್ರಲಂಭ ಪೂರ್ವಕಗಳಾಗಿವೆ. ಆದ್ದರಿಂದ ಆ ದರ್ಶನಗಳೆಲ್ಲವೂ ಮಿಥ್ಯಾಜ್ಞಾನಜನಕಗಳಾಗಿವೆ. ಆಯಾಯಾ ದರ್ಶನಗಳಲ್ಲಿ ಪ್ರತಿಪಾದಿತವಿಷಯಗಳು ಯುಕ್ತಿಶೂನ್ಯವೂ ಯುಕ್ತಿವಿರುದ್ಧವೂ ಆಗಿವೆ. ಆದಕಾರಣ ಆ ದರ್ಶನಗಳ ವಿರೋಧದಿಂದ ವೇದವಚನಗಳಿಗೆ ಅಪ್ರಾಮಾಣ್ಯವನ್ನು ಆಶಂಕಿಸಬಾರದು.

### ರಚನಾಧಿಕರಣ (ಸಾಂಖ್ಯಮತ ನಿರಾಕರಣೆ)

**॥ ಓಂ ರಚನಾನುಪಪತ್ತೇಶ್ಚ ನಾನುಮಾನಮ್ ಓಂ ॥ 2-2-1 ॥**

ಪ್ರಧಾನವು ಜಡವಾದ್ದರಿಂದ ಘಟದಂತೆ ಸ್ವತಃಪ್ರವೃತ್ತಿಶೂನ್ಯ. ಆದ್ದರಿಂದ ಅದಕ್ಕೆ ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ.

### ಅನ್ಯತ್ರಾಭಾವಾಧಿಕರಣ (ಸೇಶ್ವರಸಾಂಖ್ಯಮತ ನಿರಾಕರಣೆ)

**॥ ಓಂ ಅನ್ಯತ್ರಾಭಾವಾಚ್ಚ ನ ತೃಣಾದಿವತ್ ಓಂ ॥ 2-2-5 ॥**

'ತೃಣಾದಿಕಾರ್ಯಗಳಿಗೆ ಪೃಥಿವಿಯೇ ಪ್ರಧಾನಕಾರಣ. ಪರ್ಜನ್ಯವು ಕೇವಲ ಅನುಗ್ರಾಹಕ. ಹಾಗೆಯೇ ಪ್ರಧಾನವೇ ಜಗತ್ತಿಗೆ ಕಾರಣ. ಈಶ್ವರನು ಅನುಗ್ರಾಹಕಮಾತ್ರ'. ಹೀಗೆನ್ನುವ ಸೇಶ್ವರಸಾಂಖ್ಯಮತವು ಸಮಂಜಸವಲ್ಲ.

ಈಶ್ವರನ ಪ್ರೇರಣೆಯಿಲ್ಲದೆ ಯಾವ ವಸ್ತುಗಳಿಗೂ ಅಸ್ತಿತ್ವವೇ ಇಲ್ಲ. 'ಯಚ್ಚ

ಕಿಂಚಿತ್ ಜಗತ್ಸರ್ವಂ' ಎಂಬ ಶ್ರುತಿಯು ನುಡಿಯುವಂತೆ ಪ್ರಧಾನವೇ ಮುಂತಾದ ಸರ್ವಪದಾರ್ಥಗಳಿಗೂ ಸತ್ತಾದಿಗಳನ್ನು ನೀಡುವವನು ಈಶ್ವರ. ಹೀಗೆ ಪ್ರಧಾನಾದಿಗಳ ಸತ್ತಾದಿಗಳೇ ಈಶ್ವರಾಧೀನವಾಗಿರುವಾಗ ಅವನು ಕೇವಲ ಅನುಗ್ರಾಹಕನಾಗುವುದಾದರೂ ಹೇಗೆ ಸಾಧ್ಯ? ಆದ್ದರಿಂದ ಈಶ್ವರನು ಜಗತ್ತಿನ ಸ್ವತಂತ್ರಕಾರಣನೇ ಆಗಿದ್ದಾನೆ.

## ಅಭ್ಯುಪಗಮಾಧಿಕರಣ (ಚಾರ್ವಾಕಮತ ನಿರಾಕರಣೆ)

**|| ಓಂ ಅಭ್ಯುಪಗಮೇಽಪ್ಯರ್ಥಾಭಾವಾತ್ ಓಂ || 2-2-6 ||**

ಚಾರ್ವಾಕದರ್ಶನದಲ್ಲಿ ವಿಷಯಪ್ರಯೋಜನಾದಿಗಳು ಇಲ್ಲದಿರುವುದರಿಂದ ಅದು ಅಪ್ರಮಾಣ.

## ಪುರುಷಾಶ್ಮಾಧಿಕರಣ
### (ಜೀವೋಪಸರ್ಜನ-ಪ್ರಕೃತಿಕರ್ತೃತ್ವವಾದದ ನಿರಾಕರಣೆ)

**|| ಓಂ ಪುರುಷಾಶ್ಮವದಿತಿ ಚೇತ್ತಥಾಪಿ ಓಂ || 2-2-7 ||**

ಚೇತನನ ಸಂಬಂಧದಿಂದ ಅಚೇತನವಾದ ಶರೀರವೇ ಕಾರ್ಯವನ್ನು ನಿರ್ವಹಿಸುತ್ತದೆ. ಅದರಂತೆ ಪ್ರಕೃತಿಯು ಅಚೇತನವಾಗಿದ್ದರೂ ಚೇತನಸಂಬಂಧದಿಂದಾಗಿ ಸೃಷ್ಟ್ಯಾದಿಗಳನ್ನು ಮಾಡುತ್ತದೆ. ಆದ್ದರಿಂದ ಶ್ರೀಹರಿಯು ಜಗತ್ಕಾರಣನಲ್ಲ ಎಂದರೆ ಅದು ಯುಕ್ತವಲ್ಲ. ಶರೀರದ ಪ್ರವೃತ್ತಿಯೂ ಪರಮಾತ್ಮನ ಅಧೀನವೆಂದು 'ನ ಋತೇ ತ್ವತ್ ಕ್ರಿಯತೇ ಕಿಂಚನಾರೇ' ಎಂಬ ಶ್ರುತಿಯು ಹೇಳುತ್ತದೆ. ಆದ್ದರಿಂದ ಪ್ರಕೃತ್ಯಧೀನತ್ವವೆಂದು ಸಾಧಿಸಲು ದೃಷ್ಟಾಂತವಿಲ್ಲ. ಶ್ರೀಹರಿಯೇ ಜಗತ್ಕಾರಣ ಎಂಬ ವಿಷಯದಲ್ಲಿ ಪ್ರಮಾಣಗಳಿವೆ.

## ಅನ್ಯಥಾನುಮಿತ್ಯಧಿಕರಣ
### (ಪ್ರಕೃತ್ಯುಪಸರ್ಜನ-ಜೀವಕರ್ತೃತ್ವವಾದ ನಿರಾಕರಣೆ)

**|| ಓಂ ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್ ಓಂ || 2-2-9 ||**

ಶರೀರಸಂಬಂಧವನ್ನು ಹೊಂದಲು ಕೇವಲ ಪುರುಷನಿಗೆ ಸಾಮರ್ಥ್ಯವಿಲ್ಲ. ಆದ್ದರಿಂದ ಪ್ರಕೃತಿಯು ಅಪ್ರಧಾನ. ಪುರುಷನೇ ಪ್ರಧಾನಕರ್ತೃ ಎಂಬ ವಾದದಲ್ಲೂ ದೃಷ್ಟಾಂತವಿಲ್ಲ. ಆದ್ದರಿಂದ ಈ ವಾದವೂ ಸಮಂಜಸವಲ್ಲ.

## ವೈಶೇಷಿಕಾಧಿಕರಣ (ಅಣ್ವಾರಂಭವಾದ ನಿರಾಕರಣೆ)

### ॥ ಓಂ ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಮ್ ಓಂ ॥ 2-2-11 ॥

ವೈಶೇಷಿಕಮತದಲ್ಲಿ ಅನಿತ್ಯಪದಾರ್ಥಗಳು ಮೂರುವಿಧವಾದ ಕಾರಣಗಳಿಂದ ಹುಟ್ಟಿರುತ್ತದೆ. 1) ಸಮವಾಯಿಕಾರಣ, 2) ಅಸಮವಾಯಿಕಾರಣ, 3) ನಿಮಿತ್ತಕಾರಣ. ದ್ರವ್ಯ-ಗುಣ-ಕರ್ಮಗಳನ್ನು ಕುರಿತು ದ್ರವ್ಯವೇ ಸಮವಾಯಿಕಾರಣ. ಅವಯವಸಂಯೋಗವು ಅಸಮವಾಯಿಕಾರಣ. ಈಶ್ವರ, ಅದೃಷ್ಟ, ಕಾಲ ಮುಂತಾದವುಗಳು ನಿಮಿತ್ತಕಾರಣ. ಪರಮಾತ್ಮನು ಕರ್ತೃತ್ವಪ್ರಯೋಜಕವಾದ ನಿತ್ಯಜ್ಞಾನ, ಪ್ರಯತ್ನ, ಇಚ್ಛಾ ಹಾಗು ಸಂಖ್ಯಾ, ಪರಿಮಾಣ, ಪೃಥಕ್ತ್ವ ಸಂಯೋಗ, ವಿಭಾಗ ಹೀಗೆ ಎಂಟು ಗುಣಗಳಿಂದ ಕೂಡಿದವನು. ಆದ್ದರಿಂದ ಪರಮಾತ್ಮನಿಗೆ ಅನಂತಗುಣಪೂರ್ಣತ್ವವು ಯುಕ್ತವಲ್ಲ. ಕಾರ್ಯದಲ್ಲಿರುವ ಗುಣಗಳನ್ನು ಕುರಿತು ಕಾರಣದಲ್ಲಿರುವ ಗುಣವು ಅಸಮವಾಯಿಕಾರಣ. ಆದರೆ ತ್ರ್ಯಣುಕದಲ್ಲಿರುವ ಮಹತ್ಪರಿಮಾಣಕ್ಕೆ ದ್ವ್ಯಣುಕದ ಪರಿಮಾಣವು ಕಾರಣವಲ್ಲ. ಈ ವಾದವನ್ನು ಇಲ್ಲಿ ನಿರಾಕರಿಸುವರು.

ತ್ರ್ಯಣುಕದಲ್ಲಿರುವ ಮಹತ್ತ್ವ-ದೀರ್ಘತ್ವಪರಿಮಾಣಗಳಿಂದ ಚತುರಣುಕಾದಿಗಳ ಪರಿಮಾಣವು ಹುಟ್ಟುವಂತೆ ಪರಮಾಣುವಿನಲ್ಲಿರುವ ಅಣುತ್ವದಿಂದ ದ್ವ್ಯಣುಕದ ಪರಿಮಾಣವು ಏಕೆ ಹುಟ್ಟಬಾರದು, ಇಲ್ಲದಿದ್ದರೆ ಚತುರಣುಕಾದಿಗಳ ಮಹತ್ವ-ದೀರ್ಘತ್ವಗಳನ್ನು ಕುರಿತು ತ್ರ್ಯಣುಕಾದಿಗತವಾದ ಪರಿಮಾಣವು ಕಾರಣವಾಗದಿರಲಿ. ಹೀಗೆ ವೈಶೇಷಿಕಸಮಯವು ಅಪ್ರಾಮಾಣಿಕವಾದ್ದರಿಂದ ಪರಮಾತ್ಮನಿಗೆ ಹೇಳಿದ ಅನಂತಗುಣಪೂರ್ಣತ್ವವು ಸಮಂಜಸವೇ ಆಗಿದೆ.

## ಸಮುದಾಯಾಧಿಕರಣ (ವೈಭಾಷಿಕ-ಸೌತ್ರಾಂತಿಕಮತ ನಿರಾಕರಣೆ)

### ॥ ಓಂ ಸಮುದಾಯ ಉಭಯಹೇತುಕೇऽಪಿ ತದಪ್ರಾಪ್ತಿಃ ಓಂ ॥ 2-2-18 ॥

ಜಗತ್ತೆಲ್ಲವೂ ಪರಮಾಣುಸಮುದಾಯರೂಪವಾಗಿದೆ. ಇದಕ್ಕಿಂತ ಅತಿರಿಕ್ತವಾದ ಅವಯವಿಯೇ ಇಲ್ಲ. ಎಲ್ಲವೂ ಕ್ಷಣಿಕ. ಈಶ್ವರನ ಅಗತ್ಯವೇ ಇಲ್ಲ ಎನ್ನುವ ಈ ವಾದವೂ ಯುಕ್ತಿವಿರುದ್ಧವಾಗಿದೆ. ಪರಮಾಣುಸಮುದಾಯವು ಒಂದೇ ಪರಮಾಣುವಿನಿಂದ ಆಗಿದೆ ಎನ್ನುವುದು ವ್ಯಾಹತವಾದುದು. ಅನೇಕ ಪರಮಾಣುಗಳ ಮೇಲನದಿಂದ ಪರಮಾಣುಸಮುದಾಯದ ಉತ್ಪತ್ತಿ ಎಂದಾಗ ಸಮುದಾಯ ಉಂಟಾದರೆ ಅವುಗಳ ಮೇಲನ, ಮೇಲನವಾದರೆ ಸಮುದಾಯ ಎಂದು ಅನ್ಯೋನ್ಯಾಶ್ರಯ ದೋಷವು ತಲೆದೋರುವುದು. ಆದ್ದರಿಂದ ಈ ಮತವೂ ಅಪ್ರಾಮಾಣಿಕವು, ಪ್ರಮಾಣವಿರುದ್ಧವೂ ಆಗಿದೆ.

## ಅಸದಧಿಕರಣ

### ॥ ಓಂ ನಾಸತೋऽದೃಷ್ಟತ್ವಾತ್ ಓಂ ॥ 2-2-26 ॥

ಶೂನ್ಯದಿಂದ ಜಗತ್ತಿನ ಸೃಷ್ಟಿಯು ಆಗುತ್ತದೆ ಎನ್ನುವ ಈ ಮತವೂ ಅಪ್ರಾಮಾಣಿಕ. ಶೂನ್ಯಕ್ಕೆ ಕಾರಣತ್ವವು ಪ್ರತ್ಯಕ್ಷಾದಿ ಯಾವ ಪ್ರಮಾಣದಿಂದಲೂ ಸಿದ್ಧವಾಗಿಲ್ಲ.

## ಅನುಪಲಬ್ಧ್ಯಧಿಕರಣ (ವಿಜ್ಞಾನವಾದಿಮತ ನಿರಾಕರಣೆ)

### ॥ ಓಂ ನ ಭಾವೋऽನುಪಲಬ್ಧೇಃ ಓಂ ॥ 2-2-30 ॥

ನಿತ್ಯವೂ ನಿರಂಜನವೂ ಆದ ವಿಜ್ಞಾನ ಒಂದೇ ತತ್ವ, ಈ ಸಮಗ್ರ ಜಗತ್ತೂ ವಿಜ್ಞಾನಸ್ವರೂಪವೇ ಆಗಿದೆ. ಅದಕ್ಕಿಂತ ಅತಿರಿಕ್ತವಾದುದು ಯಾವುದೂ ಇಲ್ಲ. ಆದ್ದರಿಂದ ಜಗತ್ತಿನ ಉತ್ಪತ್ತ್ಯಾದಿಗಳ ವಿಷಯದಲ್ಲಿ ಈಶ್ವರನ ಉಪಯೋಗವಿಲ್ಲ ಎಂಬ ಆಕ್ಷೇಪವನ್ನು ಇಲ್ಲಿ ಪರಿಹರಿಸಿದ್ದಾರೆ. ಜಗತ್ತು ವಿಜ್ಞಾನಾತ್ಮಕ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಹಾಗು ಜಗತ್ತು ವಿಜ್ಞಾನಾತ್ಮಕ ಎಂಬುದು

ಪ್ರಮಾಣವಿರುದ್ಧವೂ ಆಗಿದೆ. ಘಟ-ಪಟಾದಿ ಜಗತ್ತು ಸತ್ಯ ಎಂದು ತೋರುತ್ತಿರುವುದರಿಂದ ವಿಜ್ಞಾನತತ್ವದಲ್ಲಿ ಜಗತ್ತು ಅಧ್ಯಸ್ತವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ವಿಷ್ಣುವೇ ಜಗತ್ಕಾರಣ ಎನ್ನುವುದು ಸಮಂಜಸವೇ ಆಗಿದೆ.

## ನೈಕಸ್ಮಿನ್ನಧಿಕರಣ (ಜೈನಮತ ನಿರಾಕರಣೆ)

### ।। ಓಂ ನೈಕಸ್ಮಿನ್ನಸಂಭವಾತ್ ಓಂ ।। 2-2-33 ।।

ಸತ್ತ್ವ, ಅಸತ್ತ್ವ, ಸದಸತ್ತ್ವ, ಸದಸದ್ವಿಲಕ್ಷಣತ್ವ, ಸತ್ವೇ ಸತಿ ಸದ್ವಿಲಕ್ಷಣತ್ವ, ಅಸತ್ವೇ ಸತಿ ಅಸದ್ವಿಲಕ್ಷಣತ್ವ, ಸದಸದಾತ್ಮಕತ್ವೇ ಸತಿ ಸದಸದ್ವಿಲಕ್ಷಣತ್ವ ಈ ರೀತಿ ಜಗತ್ತು ಸಪ್ತಭಂಗಿ(ಏಳುಪ್ರಾಕರ)ಗಳಿಂದ ಕೂಡಿದೆ ಎಂಬುದು ಯುಕ್ತವಲ್ಲ. ಒಂದೇ ವಸ್ತುವಿನಲ್ಲಿ ಏಳು ಪ್ರಕಾರಗಳಿರುವುದು ಅಸಂಭಾವಿತ. ಸತ್, ಅಸತ್, ಸದಸತ್ ಎಂದು ಮೂರೇ ಪ್ರಕಾರಗಳು. ಇದಕ್ಕಿಂತ ಭಿನ್ನವಾದ ಪ್ರಕಾರಗಳೆಲ್ಲವೂ ಅಪ್ರಮಾಣಿಕ.

## ಪತ್ಯುರಧಿಕರಣ (ಪಾಶುಪತಸಮಯ ನಿರಾಕರಣೆ)

### ।। ಓಂ ಪತ್ಯುರಸಾಮಂಜಸ್ಯಾತ್ ಓಂ ।। 2-2-37 ।।

ಪಶುಪತಿ ಎನಿಸಿರುವ ರುದ್ರನು ಪಾರತಂತ್ರ್ಯಾದಿ ದೋಷಯುಕ್ತನಾದ್ದರಿಂದ ಅವನು ಜಗತ್ಕರ್ತೃವಲ್ಲ. 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ' ಎಂಬ ಶ್ರುತಿಯು ಪಶುಪತಿಗೆ ಪಾರತಂತ್ರ್ಯವನ್ನು ಹೇಳುತ್ತಿದೆ.

## ಉತ್ಪತ್ತ್ಯಧಿಕರಣ (ಶಾಕ್ತಮತ ನಿರಾಕರಣೆ)

### ।। ಓಂ ಉತ್ಪತ್ತ್ಯಸಂಭವಾತ್ ಓಂ ।। 2-2-42 ।।

ಪುರುಷಾನುಗ್ರಹವಿಲ್ಲದ ಕೇವಲ ಸ್ತ್ರೀಯಿಂದ ಉತ್ಪತ್ತಿಯು ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಶಕ್ತಿಯು ಜಗತ್ಕರ್ತ್ರೀ ಎಂಬ ಮತ ಸರಿಯಲ್ಲ.

ಹೀಗೆ ಎಲ್ಲ ದರ್ಶನಗಳೂ ಯುಕ್ತಿವಿರುದ್ಧವೂ ಅಪ್ರಾಮಾಣಿಕವೂ ಆದ್ದರಿಂದ ಇವುಗಳ ವಿರೋಧವಿಲ್ಲ. ಆದಕಾರಣ ವಿಷ್ಣುವೇ ಜಗತ್ಕಾರಣ ಎನ್ನುವುದು ಸಮಂಜಸವಾಗಿದೆ.

## ತೃತೀಯಪಾದ

**ಅಣುಭಾಷ್ಯ:- 'ಆಕಾಶಾದಿಸಮಸ್ತಂ ಚ ತಜ್ಜಂ'**

**ಭಾವಾರ್ಥ:-** ಅವ್ಯಾಕೃತಾಕಾಶ, ಭೂತಾಕಾಶ, ವಾಯ್ವಾದಿಭೂತಪದಾರ್ಥಗಳು, ಅವುಗಳ ಅಭಿಮಾನಿದೇವತೆಗಳು, ಸೂತ್ರದಲ್ಲಿ ಹೇಳಿದ 'ವಿಯತ್' ಪದದಿಂದ ಉಪಲಕ್ಷಿತವಾದ ಪ್ರಕೃತಿ, ಜೀವ, ಕಾಲ, ವೇದ, ಮಹತ್ತತ್ವ ಅಹಂಕಾರ, ಮನಸ್, ಬುದ್ಧಿ ಮುಂತಾದವುಗಳು ಅದರ ಅಭಿಮಾನಿ ದೇವತೆಗಳೆಲ್ಲರೂ ಪರಮಾತ್ಮನಿಂದಲೇ ಜನ್ಮವನ್ನು ಪಡೆದಿದ್ದಾರೆ.

## ವಿಯದಧಿಕರಣ

### ॥ ಓಂ ನ ವಿಯದಶ್ರುತೇಃ ಓಂ ॥ 2-3-1 ॥

ಆಕಾಶವು ಉತ್ಪತ್ತಿಯುಳ್ಳದ್ದು ಎಂಬ ವಿಷಯದಲ್ಲಿ 'ಆತ್ಮನ ಆಕಾಶಃ ಸಂಭೂತಃ' ಎಂಬ ಶ್ರುತಿಯು ಪ್ರಮಾಣವಾಗಿದೆ. ಹೀಗೆ ಆಕಾಶದ ಉತ್ಪತ್ತಿಯು ಈಶ್ವರನಿಂದಲೇ ಆಗುವುದರಿಂದ ಈಶ್ವರನಿಗೆ ಜಗತ್ಕಾರಣತ್ವವು ಯುಕ್ತವೇ ಆಗಿದೆ.

## ಮಾತರಿಶ್ವಾಧಿಕರಣ

### ॥ ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ ॥ 2-3-8 ॥

'ಪ್ರಾಣಾದ್ ವಾಯುರಜಾಯತ' ಎಂದು ಶ್ರುತಿಯು ಇರುವುದರಿಂದ ವಾಯುವಿಗೂ ಉತ್ಪತ್ತಿ ಇದೆ. ಅನುತ್ಪತ್ತಿಯನ್ನು ಹೇಳುವ ಶ್ರುತಿಯು ಸ್ವರೂಪಾನುತ್ಪತ್ತಿಯನ್ನು ಹೇಳುತ್ತಿದೆ ಎಂದು ವ್ಯಾಖ್ಯಾನಿಸಬೇಕು.

## ಅಸಂಭವಾಧಿಕರಣ

### ॥ ಓಂ ಅಸಂಭವಸ್ತು ಸತೋಽನುಪಪತ್ತೇಃ ಓಂ ॥ 2-3-9 ॥

'ಅಸತಃ ಸದಜಾಯತ' ಎಂಬ ಶ್ರುತಿಯು ಬ್ರಹ್ಮನಿಂದ ವಾಯುವಿನ ಉತ್ಪತ್ತಿಯನ್ನು ಹೇಳುತ್ತಿದೆ ಹೊರತಾಗಿ ಅಸತ್‌ನಿಂದ ಭಗವಂತನ ಉತ್ಪತ್ತಿಯನ್ನು

ಹೇಳುತ್ತಿಲ್ಲ. ಅಸತ್‌ನಿಂದ ಸತ್‌ನ ಉತ್ಪತ್ತಿಯು ಲೋಕದಲ್ಲಿ ಎಲ್ಲೂ ಕಂಡಿಲ್ಲ. ಪರಮಾತ್ಮನಿಗೆ ಉತ್ಪತ್ತಿಯೇ ಇಲ್ಲ.

## ತೇಜೋಽಧಿಕರಣ

### ॥ ಓಂ ತೇಜೋಽತಸ್ತಥಾ ಹ್ಯಾಹ ಓಂ ॥ 2-3-10 ॥

'ತತ್ತೇಜೋಽಸೃಜತ' ಎಂಬ ಶ್ರುತಿಯು ಅಗ್ನಿಯು ವಿಷ್ಣುವಿನಿಂದ ಹುಟ್ಟಿದೆ ಎನ್ನುತ್ತಿದೆ. 'ವಾಯೋರಗ್ನಿಃ' ಎಂಬ ಶ್ರುತಿಯು ವಾಯುವಿನಿಂದ ಹುಟ್ಟಿದೆ ಎಂದು ಹೇಳಿದರೂ ವಿರೋಧವಿಲ್ಲ. ಪರಮತ್ಮನು ತಾನೇ ಅಗ್ನಿಯನ್ನು ಸೃಷ್ಟಿಮಾಡಲು ಸಮರ್ಥನಾದರೂ ಲೀಲೆಯಿಂದ ವಾಯುದ್ವಾರಾ ಸೃಷ್ಟಿಮಾಡುವನು. ಆದ್ದರಿಂದ ವಿಷ್ಣುವಿನ ಜಗತ್ಕಾರಣತ್ವಕ್ಕೆ ಭಂಗವಿಲ್ಲ.

## ಅಬಧಿಕರಣ

### ॥ ಓಂ ಆಪಃ ಓಂ ॥ 2-3-11 ॥

ಜಲವೂ ಸಹ ವಿಷ್ಣುವಿನಿಂದಲೇ ಹುಟ್ಟಿದೆ. 'ತದಪೋಽಸೃಜತ' ಎಂದು ಶ್ರುತಿ ಇದೆ. 'ಅಗ್ನೇರಾಪಃ' ಎಂಬ ಶ್ರುತಿಯು ವಿಷ್ಣುವಿನಿಂದಲೇ ಅಗ್ನಿಯಮೂಲಕ ಜಲಸೃಷ್ಟಿ ಎಂದು ಹೇಳುತ್ತಿದೆ. ಆದ್ದರಿಂದ ವಿಷ್ಣುವಿಗೆ ಜನ್ಮಾದಿಕಾರಣತ್ವವು ಯುಕ್ತವೇ ಆಗಿದೆ.

## ಪೃಥಿವ್ಯಧಿಕರಣ

### ॥ ಓಂ ಪೃಥಿವ್ಯಧಿಕಾರರೂಪಶಬ್ದಾಂತರಾದಿಭ್ಯಃ ಓಂ ॥ 2-3-12 ॥

'ತಾ ಅನ್ನಮಸೃಜಂತ' ಎಂಬ ಶ್ರುತಿಯು ಜಲಸೃಷ್ಟಿಯ ಅನಂತರದಲ್ಲಿ ಅನ್ನಸೃಷ್ಟಿಯನ್ನು ಹೇಳುತ್ತಿದೆ. 'ಅದ್ಭ್ಯಃ ಪೃಥಿವೀ' ಎಂಬ ಶ್ರುತಿಯು ಜಲದ್ವಾರಾ ಪೃಥಿವಿಯ ಸೃಷ್ಟಿಯನ್ನು ಹೇಳುತ್ತಿದೆ. ಹೀಗೆ ಶ್ರುತಿಗಳಲ್ಲಿ ಪರಸ್ಪರ ವಿರೋಧವಿದೆ ಎಂದು ಆಶಂಕಿಸಬಾರದು. 'ತಾ ಅನ್ನಮಸೃಜಂತ' ಎಂಬ ಶ್ರುತಿಯಲ್ಲಿ ಅನ್ನಶಬ್ದಕ್ಕೆ ಪೃಥಿವೀ ಎಂದೇ ಅರ್ಥವು ವಿವಕ್ಷಿತ. ಏಕೆಂದರೆ ಇದು ಭೂತಪ್ರಕರಣವಾಗಿದೆ.

'ಪೃಥಿವೀ ವಾಽನ್ನಮ್' ಎಂದು ಶ್ರುತಿಯೂ ಇದೆ. ಹೀಗೆ ಶ್ರುತಿಗಳ ವಿರೋಧ ಪರಿಹಾರವಾಗುವುದರಿಂದ ಭಗವಂತನ ಜನ್ಮಾದಿಕಾರಣತ್ವಲಕ್ಷಣಕ್ಕೆ ಭಂಗವಿಲ್ಲ.

**ಅಣುಭಾಷ್ಯ:-** **'ತೇನೈವ ಲೀಯತೇ'**

**ಭಾವಾರ್ಥ:-** ಹಿಂದೆ ಹೇಳಿದ ಆಕಾಶಾದಿಗಳೆಲ್ಲವೂ ಭಗವಂತನಿಂದಲೇ ಲಯವನ್ನು ಹೊಂದುತ್ತವೆ. ರುದ್ರನಿಂದ ಲಯಹೊಂದುವುದಲ್ಲ. ಹೀಗೆ ಮೂರು ಅಧಿಕರಣಗಳ ಸಾರವನ್ನೂ ಇಲ್ಲಿ ಸಂಗ್ರಹಿಸಿದ್ದಾರೆ.

## ತದಭಿಧ್ಯಾನಾಧಿಕರಣ

### ॥ ಓಂ ತದಭಿಧ್ಯಾನಾದೇವ ತು ತಲ್ಲಿಂಗಾತ್ ಓಂ ॥ 2-3-13 ॥

'ತಸ್ಯಾಭಿಧ್ಯಾನಾದ್ಯೋಜನಾತ್...' ಎಂಬ ಶ್ರುತಿಯು ಅನಾದಿಯಾದ ಬಂಧವೂ ಭಗವದಿಚ್ಛೆಯಿಂದ ನಿವೃತ್ತಿಯಾಗುತ್ತದೆ ಎನ್ನುತ್ತಿದೆ. ಇದರಿಂದ ಕೈಮುತ್ಯನ್ಯಾಯದಿಂದ ಸಾದಿಯಾದ ಜಗತ್ತಿಗೂ ಭಗವಂತನೇ ಸಂಹಾರಕನೆಂದು ಸಿದ್ಧವಾಗುತ್ತದೆ. 'ಸ ಇದಂ ಸರ್ವಂ ವಿಲಾಪಯತಿ' ಎಂದು ಶ್ರುತಿಯೂ ವಿಷ್ಣುವೇ ಸಂಹಾರಕನೆನ್ನುತ್ತಿದೆ. 'ರುದ್ರೋ ಮಾ ವಿಶಾಂತಕಃ' ಎಂಬ ಶ್ರುತಿಗೆ ರುದ್ರದ್ವಾರಾ ವಿಷ್ಣುವೇ ಸಂಹಾರಕ ಎಂದು ಅಭಿಪ್ರಾಯ. ಆದ್ದರಿಂದ ಶ್ರುತಿಗೆ ಅಪ್ರಾಮಾಣ್ಯವಿಲ್ಲ. ತೇನೈವ = ರುದ್ರನಿಂದಲೇ ಅಂದರೆ ರುದ್ರನು ದ್ವಾರಸಾಧನ. ಅವನ ಮೂಲಕ ಭಗವಂತನಿಂದಲೇ ಲಯವನ್ನು ಹೊಂದುತ್ತದೆ.

## ವಿಪರ್ಯಯಾಧಿಕರಣ:-

### ॥ ಓಂ ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ ಓಂ ॥ 2-3-14 ॥

ವ್ಯುತ್ಕ್ರಮದಿಂದಲೇ ಲಯವಾಗುತ್ತದೆ. 'ಕ್ರಮಾದುತ್ಪದ್ಯತೇ ಕ್ರಮಾದ್ ವಿಲೀಯತೇ' ಎಂಬ ಶ್ರುತಿಯಲ್ಲಿ 'ಕ್ರಮಾದ್ ವಿಲೀಯತೇ' ಎಂದರೆ ಉತ್ಪತ್ತಿ ಕ್ರಮಕ್ಕಿಂತಲೂ ವಿಪರೀತಕ್ರಮ ಎಂದೇ ಅರ್ಥ. 'ಅನುರೂಪಃ ಕ್ರಮಃ ಸೃಷ್ಟೌ ಪ್ರತಿರೂಪೋ ಲಯಕ್ರಮಃ' ಎಂದು ಪ್ರಮಾಣವೂ ಇದೆ.

ಇದನ್ನೇ 'ತೇನೈವ ಲೀಯತೇ' ಎಂದು ಸಂಗ್ರಹಿಸಿದ್ದಾರೆ.

## ಅಂತರಾಧಿಕರಣ

### ॥ ಓಂ ಅಂತರಾವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್ ಓಂ ॥ 2-3-15 ॥

'ತದ್ಯಚ್ಛೇತ್ ಜ್ಞಾನ ಆತ್ಮನಿ' ಎಂದು ಶ್ರುತಿಯಲ್ಲಿ ಮನಸ್ಸಿನಿಂದ ಹುಟ್ಟಿದ ವಿಜ್ಞಾನತತ್ವದಲ್ಲಿ ಮನಸ್ತತ್ವಕ್ಕೆ ಲಯವು ಶ್ರುತವಾಗಿದೆ. ಆದ್ದರಿಂದ ವಿಜ್ಞಾನ-ಮನಸ್ತತ್ವಗಳನ್ನು ಬಿಟ್ಟು ಉಳಿದವುಗಳಿಗೆ ವ್ಯುತ್ಕ್ರಮದಿಂದ ಲಯ ಎಂದು ಶಂಕಿಸುವುದು ಸರಿಯಲ್ಲ. ವಿಜ್ಞಾನ-ಮನಸ್ತತ್ವಗಳಿಗೂ ವ್ಯುತ್ಕ್ರಮದಿಂದಲೇ ಲಯ. 'ಮನಸಶ್ಚ ವಿಜ್ಞಾನಮ್' ಎಂಬ ಶ್ರುತಿಗೆ ಮನಸ್ತತ್ವದಿಂದ ವಿಜ್ಞಾನತತ್ವದ ಸೃಷ್ಟಿ ಎಂದು ಅರ್ಥವಲ್ಲ. ಮನೋರೂಪ ಇಂದ್ರಿಯದಿಂದ ಜ್ಞಾನವು ಉದಯಿಸುತ್ತದೆ ಎಂದು ಅರ್ಥ.

## ಆತ್ಮಾಧಿಕರಣ

### ॥ ಓಂ ನಾತ್ಮಾಽಶ್ರುತೇಃ ನಿತ್ಯತ್ವಾಚ್ಚ ತಾಭ್ಯಃ ಓಂ ॥ 2-3-17 ॥

ಪರಮಾತ್ಮನಿಗೆ ಲಯವಿಲ್ಲ. ಏಕೆಂದರೆ ಪರಮಾತ್ಮನು ಲಯ ಹೊಂದುತ್ತಾನೆ ಎಂಬ ವಿಷಯದಲ್ಲಿ ಆಧಾರವಿಲ್ಲ. 'ನಿತ್ಯೋ ನಿತ್ಯಾನಾಮ್' ಮುಂತಾದ ಶ್ರುತಿಗಳು ಪರಮಾತ್ಮನಿಗೆ ಲಯವಿಲ್ಲವೆಂದೇ ಹೇಳುತ್ತಿವೆ.

**ಅಣುಭಾಷ್ಯ:-** **'ಸೋಽನುತ್ಪತ್ತಿಲಯಃ ಕರ್ತಾ'**

**ಭಾವಾರ್ಥ:-** ಸ್ವತಂತ್ರಕರ್ತೃವಾದ್ದರಿಂದ ಪರಮಾತ್ಮನು ಉತ್ಪತ್ತಿ ಮತ್ತು ಲಯ ಎರಡೂ ಇಲ್ಲದವನು.

## ಜ್ಞಾಧಿಕರಣ

### ॥ ಓಂ ಜ್ಞೋಽತ ಏವ ಓಂ ॥ 2-3-18 ॥

ಜೀವನೂ ಪರಮಾತ್ಮನಿಂದಲೇ ಹುಟ್ಟುತ್ತಾನೆ. ನಿತ್ಯನಾದ ಜೀವನಿಗೂ ದೇಹಸಂಬಂಧರೂಪವಾದ ಉತ್ಪತ್ತಿ ಇದೆ ಎಂದು ಶ್ರುತಿಯು ಹೇಳುತ್ತಿದೆ.

**ಅಣುಭಾಷ್ಯ:- 'ಆಕಾಶಾದಿಸಮಸ್ತಂ ಚ ತಜ್ಜಂ'**

ಈ ವಾಕ್ಯದಿಂದಲೇ ಈ ಅಧಿಕರಣದ ಸಾರವನ್ನೂ ಸಂಗ್ರಹಿಸಿದ್ದಾರೆ.

## ಉತ್ಕ್ರಾಂತ್ಯಧಿಕರಣ

### ॥ ಓಂ ಉತ್ಕ್ರಾಂತಿಗತ್ಯಾಗತೀನಾಮ್ ಓಂ ॥ 2-3-20 ॥

ಜೀವನಿಗೆ ವಿಷ್ಣುವಿನ ಅಧೀನವಾದ ಉತ್ಕ್ರಾಂತಿ, ಗತಿ, ಆಗತಿಗಳು ಇರುವುದರಿಂದ ಜೀವನು ಅಣುಪರಿಮಾಣನಾಗಿದ್ದಾನೆ. 'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಯು ಪರಮಾತ್ಮನಿಗೆ ವ್ಯಾಪ್ತಿಯನ್ನು ಹೇಳುತ್ತಿದೆ ಹೊರತು ಜೀವನಿಗಲ್ಲ. 'ಆತ್ಮಾನಃ' ಎಂಬ ಬಹುವಚನವು ಪರಮಾತ್ಮನ ಬಹುರೂಪಗಳನ್ನು ಕುರಿತಾದದ್ದು.

**ಅಣುಭಾಷ್ಯ:- 'ಜೀವಸ್ತದ್ವಶಗಃ'**

**ಭಾವಾರ್ಥ:-** ಈ ಅಭಿಪ್ರಾಯವನ್ನು ವ್ಯಕ್ತಪಡಿಸಲೆಂದೇ ಈ ವಾಕ್ಯವನ್ನು ಹೇಳಿದ್ದಾರೆ. ಜೀವನು ಸದಾ ಉತ್ಕ್ರಾಂತಿಕಾಲದಲ್ಲಿ, ಪರಲೋಕಾದಿ ಗಮನಾಗಮನಕಾಲದಲ್ಲೂ ವಿಷ್ಣುವಿನ ಅಧೀನನಾಗಿಯೇ ಇರುತ್ತಾನೆ.

## ವ್ಯತಿರೇಕಾಧಿಕರಣ

### ॥ ಓಂ ವ್ಯತಿರೇಕೋ ಗಂಧವತ್ತಥಾ ಚ ದರ್ಶಯತಿ ಓಂ ॥ 2-3-27 ॥

ಜೀವನು ಏಕರೂಪನೇ ಎಂಬ ನಿಯಮವಿಲ್ಲ. ಯೋಗಶಕ್ತಿಯನ್ನು ಹೊಂದಿರುವ ಜೀವರು ಈಶ್ವರಾನುಗ್ರಹದಿಂದಲೇ ಅನೇಕರೂಪವನ್ನು ಪಡೆಯುವರು. ಪುಷ್ಪದ ಪರಿಮಳಕ್ಕೆ ಅಂಶಗಳಿಂದ ವಿಭಾಗವಿರುವಂತೆ ಜೀವನಿಗೂ ಅಂಶಗಳಿಂದ ವಿಭಾಗವಿದೆ. 'ಸ ಏಕಧಾ ನ ಸಪ್ತಧಾ' ಎಂಬ ಶ್ರುತಿಯು ಜೀವನ ಸ್ವರೂಪವನ್ನು ಒಂದೇ ಎಂದು ಹೇಳುತ್ತಿದೆ. 'ಅಥೈಕ ಏವ ಸನ್ ಗಂಧವದ್ವ್ಯತಿರಿಚ್ಯತೇ ಅಥ ಏಕೀಭವತಿ' ಎಂದು ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ.

**ಅಣುಭಾಷ್ಯ:- 'ಜೀವಸ್ತದ್ವಶಗಃ ಸದಾ'**

ಭಾವಾರ್ಥ:- ಜೀವಃ = ಯೋಗಿಯಾದ ಜೀವನು; ಸದಾ ತದ್ವಶಗಃ = ಸರ್ವದಾ ಭಗವಂತನ ಅಧೀನನಾಗಿದ್ದು ಗಂಧದಂತೆ ಗಮನಾಗಮನವನ್ನು ಮಾಡುತ್ತಾನೆ. ಆದ್ದರಿಂದ ಯೋಗಿಯಾದ ಜೀವನು ಒಂದೇ ಕಾಲದಲ್ಲಿ ಅನೇಕರೂಪಗಳನ್ನು ಹೊಂದುತ್ತಾನೆ.

## ಪೃಥಗುಪದೇಶಾಧಿಕರಣ

### ॥ ಓಂ ಪೃಥಗುಪದೇಶಾತ್ ಓಂ ॥ 2-3-28 ॥

ಜೀವನು ಪರಮಾತ್ಮನಿಂದ ಭಿನ್ನನೇ ಆಗಿದ್ದಾನೆ. 'ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್' ಮುಂತಾದ ಶ್ರುತಿಗಳು ವಿರುದ್ಧಧರ್ಮಾಧಿಕರಣತ್ವರೂಪಯುಕ್ತಿ ಸಹಿತವಾದದ್ದರಿಂದ ಪ್ರಬಲವಾಗಿವೆ. 'ತತ್ತ್ವಮಸಿ' ಇತ್ಯಾದಿ ಶ್ರುತಿಗಳು ಸಾವಕಾಶವಾಗಿವೆ. ಅದೆಲ್ಲವೂ ಜೀವ-ಬ್ರಹ್ಮರಿಗೆ ಜ್ಞಾನಾನಂದಾದಿಸಾದೃಶ್ಯವನ್ನು ಹೇಳುತ್ತಿವೆ.

**ಅಣುಭಾಷ್ಯ:- 'ಜೀವಸ್ತದ್ವಶಗಃ ಸದಾ'**

**ಭಾವಾರ್ಥ:-** ಜೀವಃ = ಜೀವನು, ಸದಾ ತದ್ವಶಗಃ = ಸಂಸಾರಾವಸ್ಥೆ ಹಾಗು ಮುಕ್ತ್ಯವಸ್ಥೆಗಳಲ್ಲಿ ಭಗವಂತನ ಅಧೀನನಾಗಿಯೇ ಇರುವನು. ಎಂದೂ ಐಕ್ಯವನ್ನು ಹೊಂದುವುದಿಲ್ಲ.

## ಯಾವದಧಿಕರಣ

### ॥ ಓಂ ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ಓಂ ॥ 2-3-30 ॥

'ಸೋಽನಾದಿನಾ ಪುಣ್ಯೇನ ಪಾಪೇನ ಚಾನುವಿದ್ಧಃ'. ಅನಾದಿಯಾದ ಕರ್ಮದ ಸಂಬಂಧವನ್ನು ಜೀವನಿಗೆ ಬೋಧಿಸುವ ಈ ಶ್ರುತಿಗೆ ಅಪ್ರಾಮಾಣ್ಯವಿಲ್ಲ. ಜೀವರು ನಿತ್ಯರಾಗಿದ್ದಾರೆ. ಪರಮಾತ್ಮನು ಇರುವವರೆಗೂ ಜೀವನೂ ಇರುತ್ತಾನೆ.

ಜೀವನಿಗೆ ಅನಿತ್ಯತ್ವವನ್ನು ಹೇಳುವ ಶ್ರುತಿಯು ಜೀವನ ಬಾಹ್ಯೋಪಾಧಿಯ ಅನಿತ್ಯತ್ವವನ್ನು ಹೇಳುತ್ತಿದೆ ಹೊರತು ಜೀವಸ್ವರೂಪಕ್ಕೆ ಅಲ್ಲ. ಸ್ವರೂಪೋಪಾಧಿ, ಬಿಂಬನಾದ ಪರಮಾತ್ಮ ಮತ್ತು ಬಿಂಬಸನ್ನಿಧಾನ ಇವೆಲ್ಲವೂ ನಿತ್ಯವಾದ್ದರಿಂದ ಜೀವನೂ ನಿತ್ಯ.

**ಅಣುಭಾಷ್ಯ:- 'ಜೀವಸ್ತದ್ವಶಗಃ ಸದಾ'**

**ಭಾವಾರ್ಥ:-** ಜೀವನು ನಿತ್ಯದಲ್ಲೂ ವಿಷ್ಣುವಿನ ಅಧೀನನಾಗಿ ಇರುತ್ತಾನೆ. ಉಪಾಧಿನಾಶದಿಂದಲೂ ನಾಶವಾಗುವುದಿಲ್ಲ.

## ಪುಂಸ್ತ್ವಾಧಿಕರಣ

### ॥ ಓಂ ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್ ಓಂ ॥ 2-3-31॥

ಜೀವನು ಆನಂದಾದಿಸ್ವರೂಪನೇ ಆಗಿದ್ದಾನೆ. ಆದರೂ 'ಆನಂದೀಭವತಿ' ಎಂಬ ಶ್ರುತಿಯ ವಿರೋಧವಿಲ್ಲ. ಏಕೆಂದರೆ ಬಾಲಕನಿಗೆ ಮೊದಲೇ ಇದ್ದ ಪುಂಸ್ತ್ವಕ್ಕೆ ಕಾಲವಿಶೇಷದಲ್ಲಿ ತಾರುಣ್ಯದಲ್ಲಿ ಅಭಿವ್ಯಕ್ತಿಯು ಹೇಗೋ ಅದರಂತೆ ಮುಕ್ತಿಯ ಪೂರ್ವದಲ್ಲೇ ಇದ್ದ ಜ್ಞಾನಾನಂದಾದಿಗಳು ಈಶ್ವರಪ್ರಸಾದದಿಂದ ಅಭಿವ್ಯಕ್ತವಾಗುತ್ತದೆ. ಈ ಅಭಿಪ್ರಾಯದಿಂದ 'ಆನಂದೀ ಭವತಿ' ಎಂದು ಶ್ರುತಿ ಹೇಳಿರುತ್ತದೆ.

**ಅಣುಭಾಷ್ಯ:- 'ಜೀವಸ್ತದ್ವಶಗಃ'**

**ಭಾವಾರ್ಥ:-** 'ತದ್ವಶಗಃ' ಎಂಬಲ್ಲಿರುವ ಗತಿ ಎಂಬ ಅರ್ಥದ 'ಗ'ಶಬ್ದಕ್ಕೆ ಜ್ಞಾನ ಎಂದು ಅರ್ಥ. ಜೀವನು ಭಗವದಧೀನವಾದ ಹಿಂದೆಯೇ ಇದ್ದ ಜ್ಞಾನಾನಂದದ ಅಭಿವ್ಯಕ್ತಿಯನ್ನು ಹೊಂದುವನು.

## ಕರ್ತೃತ್ವಾಧಿಕರಣ

### ॥ ಓಂ ಕರ್ತಾ ಶಾಸ್ತ್ರಾರ್ಥವತ್ವಾತ್ ಓಂ ॥ 2-3-33 ॥

ಜೀವನಿಗೆ ಕರ್ತೃತ್ವವೇ ಇಲ್ಲವೆಂದಲ್ಲಿ ವಿಧಿ-ನಿಷೇಧರೂಪವಾದ ಶಾಸ್ತ್ರವೇ ವ್ಯರ್ಥವಾಗುತ್ತದೆ. ಆದ್ದರಿಂದ ಜೀವನಿಗೂ ಕರ್ತೃತ್ವವನ್ನು ಒಪ್ಪಬೇಕು. 'ನಾನ್ಯಃ

ಕರ್ತಾ' ಎಂಬ ಶ್ರುತಿಯು ಈಶ್ವರನಿಂದ ಭಿನ್ನರಾದ ಜೀವರಿಗೆ ಸ್ವತಂತ್ರಕರ್ತೃತ್ವವನ್ನು ನಿಷೇಧಿಸುತ್ತಿದೆಯಷ್ಟೆ.

**ಅಣುಭಾಷ್ಯ:- 'ಜೀವಸ್ತದ್ವಶಗಃ'**

**ಭಾವಾರ್ಥ:-** ಜೀವನು ಈಶ್ವರಾಧೀನವಾದ ಕರ್ತೃತ್ವವನ್ನು ಹೊಂದಿದ್ದಾನೆ. ಸದಾ = ಮುಕ್ತಿಯಲ್ಲಿ ಹಾಗು ಸಂಸಾರದಲ್ಲಿ ಜೀವನು ಸ್ವತಂತ್ರಕರ್ತೃತ್ವವನ್ನು ಹೊಂದಿಲ್ಲ ಎಂದು 'ನಾನ್ಯಃ ಕರ್ತಾ' ಎಂಬ ಶ್ರುತಿಯ ಅಭಿಪ್ರಾಯ. 'ತದ್ವಶಃ' ಎಂದು ಹೇಳದೆ 'ತದ್ವಶಗಃ' ಎಂದು ಹೇಳಿ ಭಗವದಧೀನವಾದ ವಿಧಿ ನಿಷೇಧವಿಷಯಕ ಪ್ರವೃತ್ತಿಯುಳ್ಳವನು ಜೀವ. ಇದರಿಂದ ವಿಧಿನಿಷೇಧವಿಷಯಕ ಶಾಸ್ತ್ರವು ವ್ಯರ್ಥವಲ್ಲ ಎಂದು ಸೂಚಿಸಿದ್ದಾರೆ.

## ಅಂಶಾಧಿಕರಣ

### ॥ ಓಂ ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಏಕೇ ಓಂ ॥ 2-3-43 ॥

ಜೀವನು ಪರಮಾತ್ಮನ ಅಂಶನಾಗಿದ್ದಾನೆ. 'ನಾನಾ ಹ್ಯೇನಂ ವ್ಯಪದಿಶಂತಿ' ಎಂಬ ಶ್ರುತಿಯಲ್ಲಿ ಪಿತಾ-ಸಖಾ-ಭ್ರಾತಾ ಇತ್ಯಾದಿ ಅನೇಕಪ್ರಕಾರ ಈಶ್ವರನ ಸಂಬಂಧವು ಜೀವನಿಗೆ ಹೇಳಲ್ಪಟ್ಟಿದೆ. 'ಮಮೈವಾಂಶೋ ಜೀವಲೋಕೇ' ಎಂಬ ಸ್ಮೃತಿಯೂ ಜೀವನನ್ನು ಅಂಶವೆಂದು ಹೇಳಿದೆ. ಅಂಶತ್ವವನ್ನು ನಿಷೇಧಿಸಿರುವ ಶ್ರುತಿಗಳು ಸ್ವರೂಪಾಂಶವನ್ನು ಮಾತ್ರ ನಿಷೇಧಿಸುತ್ತಿವೆ.

**ಅಣುಭಾಷ್ಯ:- 'ಜೀವಸ್ತದ್ವಶಗಃ ಸದಾ ತದಾಭಾಸಃ'**

**ಭಾವಾರ್ಥ:-** 'ತದ್ವಶಗಃ' ಎಂಬಲ್ಲಿರುವ ಗತಿ ಎಂಬರ್ಥದ 'ಗ' ಎಂಬುದಕ್ಕೆ ಪ್ರವೃತ್ತಿ ಎಂದು ಅರ್ಥ. ಸರ್ವದಾ ಭಗವದಧೀನವಾದ ಪ್ರವೃತ್ತಿಯುಳ್ಳ ಜೀವನು ಈಶ್ವರನ ಪ್ರತಿಬಿಂಬರೂಪ ಅಂಶನಾಗಿದ್ದಾನೆ.

## ಅದೃಷ್ಟಾಧಿಕರಣ

### ॥ ಓಂ ಅದೃಷ್ಟಾನಿಯಮಾತ್ ಓಂ ॥ 2-3-51 ॥

ಸರ್ವಜೀವರೂ ಒಬ್ಬನೇ ಬ್ರಹ್ಮನ ಪ್ರತಿಬಿಂಬರಾಗಿದ್ದಾರೆ. ಬಿಂಬದಲ್ಲಿ ಇಲ್ಲದ ದೇವದಾನವಾದಿ ವೈಚಿತ್ರ್ಯವು ಜೀವರಲ್ಲಿ ಸಂಭವಿಸಲು ವಿದ್ಯಾ-ಅದೃಷ್ಟಾದಿಗಳೇ ನಿಮಿತ್ತ.

**ಅಣುಭಾಷ್ಯ:- 'ತದಾಭಾಸಃ'**

**ಭಾವಾರ್ಥ:-** ಪರಮಾತ್ಮನು ಏಕರೂಪನಾಗಿದ್ದಾನೆ. ಆದರೂ ವಿದ್ಯಾದಿ ವೈಚಿತ್ರ್ಯದಿಂದಾಗಿ ಜೀವರಲ್ಲಿ ದೇವದಾನವಾದಿ ವೈಚಿತ್ರ್ಯವಿದೆ. ಆದ್ದರಿಂದ ಜೀವನಿಗೆ ಪ್ರತಿಬಿಂಬರೂಪ ಅಂಶತ್ವವು ಯುಕ್ತವಾಗಿದೆ.

**ಅಣುಭಾಷ್ಯ:- 'ಹರಿಃ ಸರ್ವರೂಪೇಷ್ವಪಿ ಸಮಃ ಸದಾ'**

ಜೀವನು ಭಗವಂತನ ಅಂಶವಾದಲ್ಲಿ ಮತ್ಸ್ಯಾದಿ ಅವತಾರಗಳು ಅಂಶವಾದ್ದರಿಂದ ಜೀವನಿಗೂ ಭಗವಂತನ ಅವತಾರಗಳಿಗೂ ಸಾಮ್ಯವುಂಟಾಗುತ್ತದೆ ಎಂಬ ಆಕ್ಷೇಪವನ್ನು ಇಲ್ಲಿ ಪರಿಹರಿಸಿದ್ದಾರೆ. ಮತ್ಸ್ಯಾದಿ ಅವತಾರಗಳು ಭಗವಂತನ ಅಭಿನ್ನಾಂಶಗಳು. ಭಗವಂತನು ಎಲ್ಲ ರೂಪದಲ್ಲಿ ಸಮನಾಗಿದ್ದಾನೆ. ಜೀವನು ಭಿನ್ನಾಂಶನಾಗಿದ್ದಾನೆ.

## ಚತುರ್ಥಪಾದ

## ಪ್ರಾಣೋತ್ಪತ್ತ್ಯಧಿಕರಣ

### ॥ ಓಂ ತಥಾ ಪ್ರಾಣಾಃ ಓಂ ॥ 2-4-1 ॥

ಇಂದ್ರಿಯಗಳೂ ಉತ್ಪತ್ತಿಯನ್ನು ಹೊಂದಿವೆ. 'ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ' ಎಂದು ಶ್ರುತಿಯು ಪ್ರಮಾಣವಾಗಿದೆ. 'ಪ್ರಾಣಾ ಏವಾನ್ನಾದಯಃ' ಎಂಬ ಇಂದ್ರಿಯಗಳಿಗೆ ಅನಾದಿತ್ವವನ್ನು ಹೇಳುವ ಶ್ರುತಿಯು ಸೂಕ್ಷ್ಮವಾದ ಇಂದ್ರಿಯವನ್ನು ಕುರಿತದ್ದಾಗಿದೆ.

## ತತ್ಪ್ರಾಗಧಿಕರಣ

### ॥ ಓಂ ತತ್‌ಪ್ರಾಕ್ ಶ್ರುತೇಶ್ಚ ಓಂ ॥ 2-4-4 ॥

'ಮನಸ್ಸರ್ವೇಂದ್ರಿಯಾಣಿ ಚ' ಎಂದು ಶ್ರುತಿ ಇರುವುದರಿಂದ ಮನಸ್ಸೂ ಸಹ

ಉತ್ಪತ್ತಿಯುಳ್ಳದ್ದಾಗಿದೆ. ಬೇರೆ ಇಂದ್ರಿಯಗಳಿಗಿಂತಲೂ ಮೊದಲು ಉತ್ಪನ್ನವಾದದ್ದು ಎಂಬ ಅಭಿಪ್ರಾಯದಿಂದ ಶ್ರುತಿಯಲ್ಲಿ ಪ್ರತ್ಯೇಕ ಮನಸ್ಸನ್ನು ಗ್ರಹಣ ಮಾಡಿದ್ದಾರೆ ಹೊರತು ಮನಸ್ಸನ್ನು ನಿತ್ಯವೆಂಬ ಅಭಿಪ್ರಾಯದಿಂದಲ್ಲ. 'ನಿತ್ಯಂ ಮನಃ' ಎಂಬ ಶ್ರುತಿಯು ಸೂಕ್ಷ್ಮಮನಸ್ಸನ್ನು ಕುರಿತದ್ದಾಗಿದೆ.

## ತತ್ಪೂರ್ವಕತ್ವಾಧಿಕರಣ

### ॥ ಓಂ ತತ್ಪೂರ್ವಕತ್ವಾದ್ವಾಚಃ ಓಂ ॥ 2-4-5 ॥

'ಮನಃಪೂರ್ವರೂಪಂ ವಾಗುತ್ತರರೂಪಂ' ಎಂಬ ಶ್ರುತಿಯಲ್ಲಿ ವಾಗಿಂದ್ರಿಯಕ್ಕೆ ಮನಸ್ಸು ಕಾರಣವೆಂದು ಶ್ರುತವಾಗಿದೆ. ಇದರಿಂದ ವಾಗಿಂದ್ರಿಯವು ಉತ್ಪತ್ತಿಯುಳ್ಳದ್ದೆಂದು ಸಿದ್ಧವಾಗುತ್ತದೆ. 'ವಾಗ್ ವಾವ ನಿತ್ಯಾ' ಎಂಬ ಶ್ರುತಿಯು ವಾಗಿಂದ್ರಿಯಕ್ಕೆ ನಿತ್ಯವಾದ ವೇದವನ್ನು ಉಚ್ಚರಿಸುವ ಯೋಗ್ಯತೆ ಇರುವುದರಿಂದ ಔಪಚಾರಿಕವಾಗಿ ನಿತ್ಯವೆಂದು ಹೇಳಿದೆ.

**ಅಣುಭಾಷ್ಯ:- 'ಮುಖ್ಯಪ್ರಾಣಶ್ಚೇಂದ್ರಿಯಾಣಿ'**

**ಭಾವಾರ್ಥ:-** ಈ ಮೂರು ಅಧಿಕರಣಗಳ ಸಾರವನ್ನು ಈ ವಾಕ್ಯದಿಂದ ಸಂಗ್ರಹಿಸಿದ್ದಾರೆ.

## ಸಪ್ತಗತ್ಯಧಿಕರಣ

### ॥ ಓಂ ಸಪ್ತಗತೇರ್ವಿಶೇಷಿತತ್ವಾಚ್ಚ ॥ 2-4-6 ॥

ಜ್ಞಾನಸಾಧನವಾದ ಇಂದ್ರಿಯಗಳು ಏಳು. ಶ್ರೋತ್ರ-ಚಕ್ಷುಃ-ಸ್ಪರ್ಶ-ರಸನ-ಘ್ರಾಣ-ಮನಸ್-ಬುದ್ಧಿ. ಕರ್ಮೇಂದ್ರಿಯಗಳನ್ನೂ ಸೇರಿಸಿ ಒಟ್ಟು ಹನ್ನೆರಡು ಇಂದ್ರಿಯಗಳು. 'ಸಪ್ತ ಪ್ರಾಣಾಃ' ಎಂದು ಶ್ರುತಿಯು ಇಂದ್ರಿಯಗಳನ್ನು ಏಳು ಎಂದಿರುವುದು ಜ್ಞಾನೇಂದ್ರಿಯದ ಅಭಿಪ್ರಾಯದಿಂದ.

## ಅಣ್ವಧಿಕರಣ

### ॥ ಓಂ ಅಣವಶ್ಚ ಓಂ ॥ 2-4-8 ॥

ಇಂದ್ರಿಯಗಳು ಅಣುಪರಿಮಾಣಗಳಾಗಿವೆ. ಅಣುಭಿಃ ಪಶ್ಯತಿ ಅಣುಭಿಃ ಶೃಣೋತಿ' ಎಂದು ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. ಪ್ರಕಾಶದಿಂದ ವ್ಯಾಪ್ತಿಯನ್ನು ಹೊಂದಿರುವುದರಿಂದ ದೂರದ ಶಬ್ದವನ್ನು ಶ್ರವಣ ಮಾಡುತ್ತೇವೆ. ಹೀಗೆ ವ್ಯಾಪ್ತಿಯು ಇರುವ ಕಾರಣದಿಂದ 'ದಿವೀವ ಚಕ್ಷುರಾತತಮ್' ಎಂಬ ಶ್ರುತಿಯ ವಿರೋಧವಿಲ್ಲ.

## ಶ್ರೇಷ್ಠಾಧಿಕರಣ

### || ಓಂ ಶ್ರೇಷ್ಠಶ್ಚ ಓಂ || 2-4-9 ||

ಮುಖ್ಯಪ್ರಾಣನೂ ಉತ್ಪತ್ತಿಯುಳ್ಳವನು. 'ಆತ್ಮತ ಏಷಃ ಪ್ರಾಣೋ ಜಾಯತೇ' ಎಂದು ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ. 'ನೈಷ ಪ್ರಾಣ ಉದೇತಿ' ಎಂಬ ಶ್ರುತಿಯು ಸೂಕ್ಷ್ಮಮುಖ್ಯಪ್ರಾಣನ ಬಗ್ಗೆ ಹೇಳುತ್ತಿದೆ.

**ಅಣುಭಾಷ್ಯ:- 'ಮುಖ್ಯಪ್ರಾಣಃ ತದುದ್ಭವಃ'**

**ಭಾವಾರ್ಥ:-** ಇದೆಲ್ಲವನ್ನೂ ಈ ವಾಕ್ಯದಿಂದ ಸಂಗ್ರಹಿಸಿದ್ದಾರೆ. 'ಮುಖ್ಯಪ್ರಾಣಶ್ಚ' ಎಂಬಲ್ಲಿರುವ ಚಶಬ್ದದಿಂದ ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಗಳು ಒಟ್ಟು ಹನ್ನೆರಡು, ಇಂದ್ರಿಯಗಳು ಸ್ವರೂಪದಿಂದ ಅಣುವಾಗಿ ಪ್ರಕಾಶದಿಂದ ವ್ಯಾಪ್ತವಾಗಿವೆ. ಇಂದ್ರಿಯಗಳು ಮುಖ್ಯವಾಗಿ ಜೀವಾಧೀನ ವಾಗಿವೆ. ಪರಮಮುಖ್ಯವಾಗಿ ಈಶಾಧೀನವಾಗಿವೆ. ಮುಖ್ಯಪ್ರಾಣನು ಹೃದಯದಲ್ಲಿ ಅಣುವಾಗಿ ಬಾಹ್ಯದಲ್ಲಿ ಮಹತ್ ಆಗಿದ್ದಾನೆ. ಇವೇ ಮುಂತಾದ ವಿಷಯಗಳು ಮುಖ್ಯಪ್ರಾಣಶ್ಚ ಎಂಬಲ್ಲಿರುವ 'ಚ'ಶಬ್ದದಿಂದ ಸಂಗ್ರಹಿಸಿದ್ದಾರೆ.

## ಚಕ್ಷುರಾದ್ಯಧಿಕರಣ

### || ಓಂ ಚಕ್ಷುರಾದಿವತ್ತು ತತ್‌ಸಹ ಶಿಷ್ಟಾದಿಭ್ಯಃ ಓಂ || 2-4-11 ||

ಮುಖ್ಯಪ್ರಾಣನೂ ಚಕ್ಷುರಾದಿ ಇಂದ್ರಿಯಗಳು ಅದರ ಅಭಿಮಾನಿ ದೇವತೆಗಳಂತೆ ಪರಮಾತ್ಮನ ಅಧೀನನಾಗಿದ್ದಾನೆ. 'ಸರ್ವಂ ಹ್ಯೇವ ಏತತ್ ಪರಮವತಿಷ್ಠತೇ' ಎಂದು ಶ್ರುತಿಯು ಭಗವದಧೀನತ್ವವನ್ನು ಮುಖ್ಯಪ್ರಾಣನಿಗೆ

ಹೇಳಿದೆ. 'ನ ಪ್ರಾಣಃ ಕಿಂಚಿದಾಶ್ರಿತಃ' ಎಂಬ ಶ್ರುತಿಯು ಮುಖ್ಯಪ್ರಾಣನು ಭಗವಂತನನ್ನು ಬಿಟ್ಟು ಇತರರನ್ನು ಆಶ್ರಯಿಸಿಲ್ಲವೆಂದು ಹೇಳುತ್ತಿದೆ.

**ಅಣುಭಾಷ್ಯ:- 'ಸ ವಿಷ್ಣೋರ್ವಶಗಃ'**

**ಭಾವಾರ್ಥ:-** ಮುಖ್ಯಪ್ರಾಣನು ವಿಷ್ಣುವಿನ ಅಧೀನದಲ್ಲಿದ್ದಾನೆ. ಇಷ್ಟನ್ನೇ ಹೇಳಿದ್ದರೆ ಸಾಕಾಗುತ್ತಿತ್ತು. ಪುನಃ 'ಮುಖ್ಯಪ್ರಾಣವಶೇ ಸರ್ವಂ' ಮುಖ್ಯಪ್ರಾಣನ ಅಧೀನದಲ್ಲಿ ರುದ್ರಾದಿಗಳಿದ್ದಾರೆ ಎಂದು ಹೇಳಿದ್ದಾರೆ. ಇದರಿಂದ 'ನ ಪ್ರಾಣಃ ಕಿಂಚಿದಾಶ್ರಿತಃ' ಎಂಬ ಶ್ರುತಿಯು ಮುಖ್ಯಪ್ರಾಣನು ಅಪ್ರಧಾನ ಈಶ್ವರನೆಂದು ಹೇಳುತ್ತಿದೆ ಎಂದು ಸೂಚಿಸಿದ್ದಾರೆ.

## ಪಂಚವೃತ್ತ್ಯಧಿಕರಣ

### ।। ಓಂ ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ ಓಂ ।। 2-4-13 ।।

ಮನಸ್ಸಿನಲ್ಲಿ ಎರಡು ವರ್ಗಗಳಿವೆ ಎಂದು 'ಮನಸೋ ವಾ ಮನಃ ಬುದ್ಧೇಃ ಬುದ್ಧಿಃ...' ಎಂಬ ಶ್ರುತಿಯಿಂದ ತಿಳಿದುಬರುತ್ತದೆ. ಆದರಂತೆ ಪ್ರಾಣಾಪಾನಾದಿಗಳು ಮುಖ್ಯಪ್ರಾಣನ ಸ್ವರೂಪಗಳು ಆಗಿವೆ. ಹಾಗೆಯೇ ದಾಸರೂಪರಾದ ಪ್ರಾಣಾದಿಗಳ ವರ್ಗವೂ ಬೇರೊಂದು ಇದೆ. ಆದ್ದರಿಂದ 'ಸರ್ವೇ ವಾ ಏತೇ ಮುಖ್ಯದಾಸಾಃ' ಎಂಬ ಶ್ರುತಿಗೂ 'ಮುಖ್ಯಸ್ಯೈವ ಸ್ವರೂಪಾಣಿ ಪ್ರಾಣಾದ್ಯಾಃ' ಎಂಬ ಶ್ರುತಿಗೂ ವಿರೋಧವಿಲ್ಲ.

**ಅಣುಭಾಷ್ಯ:- 'ಮುಖ್ಯಪ್ರಾಣಶ್ಚೇಂದ್ರಿಯಾಣಿ'**

ಭಾವಾರ್ಥ:- 'ಮುಖ್ಯಪ್ರಾಣಶ್ಚ ಇಂದ್ರಿಯಾಣಿ' ಎಂದು ಇಂದ್ರಿಯಗಳು ಹಾಗು ಮುಖ್ಯಪ್ರಾಣನನ್ನು ಪ್ರತ್ಯೇಕವಾಗಿ ನಿರ್ದೇಶಿಸಿದ್ದಾರೆ. ಇದರಿಂದ ಮುಖ್ಯಪ್ರಾಣನು ಇಂದ್ರಿಯನಲ್ಲವೆಂದು ಸೂಚಿತವಾಗುತ್ತದೆ. ಇಲ್ಲದಿದ್ದರೆ 'ಸರ್ವೇಽಪಿ ಪ್ರಾಣಾಃ' ಎಲ್ಲ ಇಂದ್ರಿಯಗಳು ಎಂದು ನಿರ್ದೇಶಿಸಬಹುದಿತ್ತು.

## ಅಣ್ವಧಿಕರಣ

### ।। ಓಂ ಅಣುಶ್ಚ ಓಂ ।। 2-4-14 ।।

ಮುಖ್ಯಪ್ರಾಣನು ಅಣುವಾಗಿದ್ದಾನೆ. ವ್ಯಾಪ್ತನೂ ಆಗಿದ್ದಾನೆ. ಹೃದಯದಲ್ಲಿ ಪ್ರಾಣರೂಪದಿಂದ ಅಣುವಾಗಿದ್ದಾನೆ. ದೇಹದ ಹೊರಗೆ ವಾಯುರೂಪದಿಂದ ವ್ಯಾಪ್ತನಾಗಿದ್ದಾನೆ. ಆದ್ದರಿಂದ 'ಪ್ರಾಣೋ ವಾ ಅಣುಃ' ಎಂಬ ಶ್ರುತಿಗೂ 'ಪ್ರಾಣ ಏವಾಧಸ್ತಾತ್' ಎಂಬ ಶ್ರುತಿಗೂ ವಿರೋಧವಿಲ್ಲ.

## ಜ್ಯೋತಿರಾದ್ಯಧಿಕರಣ

### ।। ಓಂ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಓಂ ।। 2-4-15 ।।

ಅಗ್ನಿಯೇ ಮುಂತಾದ ಜ್ಯೋತಿಸ್‌ಗಳಿಗೆ ನಿಯಾಮಕನಾದ ಭಗವಂತನೇ ತೇಜೋರೂಪವಾಗಿರುವ ಚಕ್ಷುರಾದಿ ಇಂದ್ರಿಯಗಳಿಗೆ ನಿಯಾಮಕ. 'ಯಶ್ಚಕ್ಷುಷಿ ತಿಷ್ಠನ್...' ಎಂಬ ಶ್ರುತಿಯಲ್ಲಿ ಹೇಳಿರುವುದರಿಂದ ಇಂದ್ರಿಯಗಳು ಪರಮಾತ್ಮನಿಂದಲೇ ಪ್ರೇರಿತವಾಗಿವೆ ಹೊರತು ಜೀವನಿಂದ ಅಲ್ಲ. ಜೀವನಿಗೆ ಕ್ರಿಯಾಸಾಧನವಾದ್ದರಿಂದ, ಜೀವನೊಂದಿಗೆ ಬಹುಕಾಲ ಸಂಬಂಧ ಹೊಂದಿರುವುದ ರಿಂದ ಜೀವಕರಣಗಳೆಂದು ಪ್ರಸಿದ್ಧವಾಗಿವೆ.

**ಅಣುಭಾಷ್ಯ:- 'ಇಂದ್ರಿಯಾಣಿ ತದುದ್ಭವಾನಿ'**

**ಭಾವಾರ್ಥ:-** ಇಂದ್ರಿಯಗಳು ಸೂಕ್ಷ್ಮರೂಪದಿಂದ ನಿತ್ಯವಾಗಿದ್ದರೂ ಸೃಷ್ಟಿಕಾಲದಲ್ಲಿ ಈಶ್ವರನಿಂದ ಭೂತೋಪಚಯರೂಪ ಉತ್ಪತ್ತಿಯುಳ್ಳವುಗಳಾಗು ತ್ತವೆ. ಹೀಗೆ ಈಶ್ವರಪ್ರಯೋಜ್ಯಗಳಾದ್ದರಿಂದ ಈಶ್ವರ ಸಂಬಂಧಿಗಳೇ ಆಗಿವೆ.

## ತ ಇಂದ್ರಿಯಾದ್ಯಧಿಕರಣ

### ।। ಓಂ ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ಓಂ ।। 2-4-18 ।।

ಮುಖ್ಯಪ್ರಾಣನನ್ನು ಬಿಟ್ಟು ಚಕ್ಷುರಾದಿಗಳು ಮಾತ್ರ ಇಂದ್ರಿಯಗಳು. ಮುಖ್ಯಪ್ರಾಣನು ಇಂದ್ರಿಯನಲ್ಲ. 'ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತ್ವನಿಂದ್ರಿಯಮ್' ಎಂದು ಶ್ರುತಿಯು ಆಧಾರವಾಗಿದೆ.

**ಅಣುಭಾಷ್ಯ:- 'ಮುಖ್ಯಪ್ರಾಣವಶೇ ಸರ್ವಂ ಸ ವಿಷ್ಣೋರ್ವಶಗಃ ಸದಾ'**

**ಭಾವಾರ್ಥ:-** ರುದ್ರಾದಿ ಜಗತ್ತೆಲ್ಲವೂ ಮುಖ್ಯಪ್ರಾಣನ ಅಧೀನದಲ್ಲಿದೆ. ಅವಾಂತರ ಮುಖ್ಯೇಶ್ವರನಾದ ಪ್ರಾಣನು ಸರ್ವದಾ ವಿಷ್ಣುವಿನ ವಶದಲ್ಲಿರುವನು. ಸಂಸಾರದಲ್ಲಿ ಅವಾಂತರ ಈಶ್ವರನಾದವನು ಮುಕ್ತಿಯಲ್ಲಿ ಮುಖ್ಯೇಶ್ವರನೇ ಆಗಬಹುದು ಎಂಬ ಸಂದೇಹವನ್ನು ಪರಿಹರಿಸಲು 'ಸದಾ ವಿಷ್ಣೋರ್ವಶಗಃ' ಎಂದಿದ್ದಾರೆ. ಮುಖ್ಯಪ್ರಾಣನು ಮೋಕ್ಷದಲ್ಲಿ ಮತ್ತು ಸಂಸಾರದಲ್ಲಿಯೂ ವಿಷ್ಣುವಿನ ಅಧೀನ, ಮುಕ್ತಿಯಲ್ಲೂ ಅವನಿಗೆ ಸ್ವಾತಂತ್ರ್ಯವಿಲ್ಲ.

## ಸಂಜ್ಞಾಧಿಕರಣ

### ॥ ಓಂ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್‌ಕುರ್ವತ ಉಪದೇಶಾತ್ ಓಂ ॥ 2-4-21 ॥

ನಾಮರೂಪಾತ್ಮಕವಾದ ಪ್ರಪಂಚವೆಲ್ಲವೂ ತೇಜಸ್ಸು, ಅಪ್ ಮತ್ತು ಅನ್ನ ಈ ಮೂರನ್ನು ಮಿಶ್ರಣಗೊಳಿಸುವ ವಿಷ್ಣುವಿನಿಂದಲೇ ಹುಟ್ಟಿದೆ ಹೊರತು ಚತುರ್ಮುಖಬ್ರಹ್ಮನಿಂದ ಅಲ್ಲ. 'ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ ನಾಮಾನಿ ಕೃತ್ವಾಭಿವದನ್ಯದಾಸ್ತೇ' ಎಂದು ಪುರುಷಸೂಕ್ತವು ಇದನ್ನು ಪ್ರತಿಪಾದಿಸಿದೆ.

**ಅಣುಭಾಷ್ಯ:- 'ಮುಖ್ಯಪ್ರಾಣಶ್ಚ ದೇಹಶ್ಚೈವ ತದುದ್ಭವಃ'**

**ಭಾವಾರ್ಥ:-** ಕೇವಲ ಮುಖ್ಯಪ್ರಾಣಾದಿಗಳು ಮಾತ್ರವಲ್ಲದೆ ನಾಮ ರೂಪಾತ್ಮಕವಾದ ಸಮಸ್ತ ಜಗತ್ತೂ ವಿಷ್ಣುವಿನಿಂದಲೇ ಹುಟ್ಟಿದೆ.

## ಮಾಂಸಾಧಿಕರಣ

### ॥ ಓಂ ಮಾಂಸಾದಿ ಭೌಮಂ ಯಥಾಶಬ್ದಮಿತರಯೋಶ್ಚ ಓಂ ॥ 2-4-22 ॥

ದೇಹದಲ್ಲಿರುವ ಮಾಂಸಾದಿಗಳು ಪಾರ್ಥಿವವಾಗಿವೆ. ಉಳಿದ ಭಾಗಗಳು ಜಲ, ತೇಜಸ್ಸುಗಳ ಕಾರ್ಯವಾಗಿವೆ. 'ಯತ್ ಕಠಿನಂ ಸಾ ಪೃಥಿವೀ ಯದ್ ದ್ರವಂ

ತದಾಪಃ ಯದುಷ್ಣಂ ತತ್ತೇಜಃ' ಎಂದು ಶ್ರುತಿಯಲ್ಲಿ ಹೇಳಿರುವಂತೆ ಸ್ವೀಕರಿಸಬೇಕು. ಶೋಣಿತಾದಿಗಳು ಜಲದ ಕಾರ್ಯ. ಮಜ್ಜಾದಿಗಳು ತೈಜಸ. ಹೀಗೆ ಶರೀರವು ತ್ರ್ಯಾತ್ಮಕವಾಗಿದೆ. ಆದ್ದರಿಂದ 'ಇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ' ಎಂಬ ಶ್ರುತಿಯ ವಿರೋಧವಿಲ್ಲ.

**ಅಣುಭಾಷ್ಯ:- ದೇಹಶ್ಚೈವ ತದುದ್ಭವಃ'**

**ಭಾವಾರ್ಥ:-** ಈ ವಾಕ್ಯದಲ್ಲಿರುವ 'ಚ'ಶಬ್ದದಿಂದ ಮಾಂಸಾದಿಗಳು ಪಾರ್ಥಿವ, ಶೋಣಿತಾದಿಗಳು ಜಲೀಯ, ಮಜ್ಜಾದಿಗಳು ತೈಜಸ ಎಂಬುದನ್ನು ಸಂಗ್ರಹಿಸಿದ್ದಾರೆ.

**ಅಣುಭಾಷ್ಯ:- 'ಸರ್ವದೋಷೋಜ್ಝಿತಸ್ತಸ್ಮಾತ್ ಭಗವಾನ್ ಪುರುಷೋತ್ತಮಃ । ಉಕ್ತಾ ಗುಣಾಶ್ಚಾವಿರುದ್ಧಾಸ್ತಸ್ಯ ವೇದೇನ ಸರ್ವಶಃ' ॥**

**ಭಾವಾರ್ಥ:-** ಈ ಪಾದದಲ್ಲಿ ಈಶ್ವರನು ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನಾದ್ದರಿಂದ ಮತ್ತು ಜಗತ್ತೆಲ್ಲವೂ ಅವನ ಅಧೀನವಾದ್ದರಿಂದ ವಿಷ್ಣುವೇ ಸರ್ವೇಶ್ವರ ಎಂದು ಪ್ರತಿಪಾದಿಸಿದ್ದಾರೆ. ಅವನ ಸರ್ವೇಶ್ವರತ್ವಕ್ಕೆ ಭಂಗ ಉಂಟುಮಾಡುವ ಎಲ್ಲ ದೋಷಗಳಿಂದಲೂ ರಹಿತನಾಗಿದ್ದಾನೆ. ಅವನ ಸರ್ವೇಶ್ವರತ್ವವನ್ನು ಸಾಧಿಸಲು ಹೇಳಿದ ಸಾರ್ವಜ್ಞ್ಯಾದಿಗುಣಗಳು ಯಾವುದೂ ವೇದದಿಂದ ವಿರುದ್ಧವಲ್ಲ.

ಅನಂತವಾದ ವೇದರಾಶಿಯು ಯೋಗವೃತ್ತಿಯಿಂದ ಪ್ರತಿಪಾದಿಸಿದ ವಿಷ್ಣುವಿನ ಅನಂತಗುಣಗಳು ಯುಕ್ತಿ, ಸಮಯ, ಶ್ರುತಿ, ಯುಕ್ತಿಸಹಿತಶ್ರುತಿ ಇವು ಯಾವುದರಿಂದಲೂ ವಿರುದ್ಧವಲ್ಲ. ಆದ್ದರಿಂದಲೇ ವಿಷ್ಣುವೇ ಸರ್ವೋತ್ತಮ ದೇವತೆ.

## ॥ ತೃತೀಯೋಽಧ್ಯಾಯಃ ॥

# ಪ್ರಥಮಪಾದ

ಸಮನ್ವಯ-ಅವಿರೋಧ ಅಧ್ಯಾಯಗಳಿಂದ ಗುಣಪೂರ್ಣವಾದ ದೋಷರಹಿತವಾದ ಬ್ರಹ್ಮಸ್ವರೂಪವು ಸಿದ್ಧವಾಯಿತು. ಆ ಬ್ರಹ್ಮನ ಪ್ರಸಾದವು ವೈರಾಗ್ಯ, ಭಕ್ತಿ, ಉಪಾಸನಾ ಮತ್ತು ಅಪರೋಕ್ಷಜ್ಞಾನರೂಪ ಸಾಧನಗಳಿಂದ ಉಂಟಾಗುವುದು. ಈ ಸಾಧನಗಳನ್ನು ಮೂರನೆಯ ಈ ಅಧ್ಯಾಯದಲ್ಲಿ ನಿರೂಪಿಸುತ್ತಾರೆ.

ಪ್ರಥಮಪಾದದಲ್ಲಿ ವೈರಾಗ್ಯ ಉಂಟಾಗಲು ಜೀವನ ದುಃಖದಿಂದ ಕೂಡಿದ ಗಮನಾಗಮನಗಳು, ಸ್ವರ್ಗ, ನರಕ, ಗರ್ಭವಾಸಾದಿಗಳ ಸ್ವರೂಪವು ನಿರೂಪಿಸಲ್ಪಡುತ್ತದೆ.

## ತದಂತರಾಧಿಕರಣ

### ॥ ಓಂ ತದಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಮ್ ಓಂ ॥ 3-1-1 ॥

ಜೀವನು ಒಂದು ದೇಹವನ್ನು ತೊರೆದು ಮತ್ತೊಂದು ದೇಹವನ್ನು ಕುರಿತು ಹೋಗುವಾಗ ಭೂತಗಳಿಂದ ಸಹಿತನಾಗಿಯೇ ಹೋಗುವನು. ಇದು 'ವೇತ್ಥ ಯಥಾ ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ' ಎಂಬ ಪ್ರವಹಣ-ಶ್ವೇತಕೇತು-ಉದ್ದಾಲಕ ಇವರ ಸಂವಾದದಿಂದ ತಿಳಿಯುವುದು.

## ತ್ರ್ಯಾತ್ಮಕತ್ವಾಧಿಕರಣ

### ॥ ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ ॥ 3-1-2 ॥

ದೇಹದ ಗಮನಸಮಯದಲ್ಲಿ ಎಲ್ಲ ಭೂತಗಳಿಂದ ಸಹಿತನಾಗಿಯೇ ತೆರಳುವನು. ಜಲದ ಬಹುಭಾಗ ಶರೀರದಲ್ಲಿರುವುದರಿಂದ ಶ್ರುತಿಯಲ್ಲಿ 'ಅಪ್'ಶಬ್ದವು ಪ್ರಯೋಗಿಸಲ್ಪಟ್ಟಿದೆ. ಜಲವು ಪೃಥಿವೀ-ಜಲ-ತೇಜಸ್ ಈ ಮೂರನ್ನೊಳಗೊಂಡಿದೆ. ಇದರಿಂದ ಮೂರನ್ನೂ ಹೇಳಿದಂತಾಗುತ್ತದೆ.

## ಪ್ರಾಣಗತ್ಯಧಿಕರಣ

### ॥ ಓಂ ಪ್ರಾಣಗತೇಶ್ಚ ಓಂ ॥ 3-1-3 ॥

'ಯತ್ರ ವಾವ ಭೂತಾನಿ ತತ್ರ ಕರಣಾನಿ' ಎಂಬ ಶ್ರುತಿಯಿಂದ ಭೂತಗಳು ಇಂದ್ರಿಯಗಳನ್ನು ಬಿಟ್ಟು ಇರುವುದಿಲ್ಲವೆಂದು ತಿಳಿಯುವುದು. ಆದ್ದರಿಂದ ಜೀವನು ಭೂತಗಳಿಂದ ಯುಕ್ತನಾಗಿಯೇ ಇತರ ಲೋಕಗಳಿಗೆ ಹೋಗುವನು.

## ಅಗ್ನ್ಯಾದ್ಯಧಿಕರಣ

### ॥ ಓಂ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ ॥ 3-1-4 ॥

'ಅಗ್ನಿಂ ವಾಗಪ್ಯೇತಿ ವಾ ತಂ ಪ್ರಾಣಃ.....' ಎಂಬ ಶ್ರುತಿಯಿಂದ ವಾಗಾದಿ ಇಂದ್ರಿಯಗಳು ಅಗ್ನ್ಯಾದಿಗಳಲ್ಲಿ ಲಯವನ್ನು ಹೊಂದುವುದು ಎಂದು ಸಿದ್ಧವಾಗುತ್ತದೆ. ಆದ್ದರಿಂದ ಜೀವನೊಂದಿಗೆ ಇಂದ್ರಿಯಗಳಿಗೆ ಗಮನವಿಲ್ಲ ಎನ್ನುವುದು ಯುಕ್ತವಲ್ಲ. ಇಂದ್ರಿಯಗಳು ಒಂದು ಅಂಶದಿಂದ ಅಗ್ನ್ಯಾದಿಗಳನ್ನು ಕುರಿತು ತೆರಳುವುದು. ಮತ್ತೊಂದು ಅಂಶದಿಂದ ಜೀವನೊಂದಿಗೆ ಸಂಚರಿಸುತ್ತದೆ.

'ಪುರುಷಸ್ಯಾಮೃತೌ ಬ್ರಹ್ಮನ್ ಪ್ರಾಣಾ ಭಾಗತ ಏವ ತು ।
ಅಧಿದೈವಂ ಪ್ರಾಪ್ನುವಂತಿ ಭಾಗತೋಽನುವ್ರಜಂತಿ ತಮ್' ॥

ಎಂದು ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ.

## ಪ್ರಥಮೇಽಶ್ರವಣಾಧಿಕರಣ

### ॥ ಓಂ ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ಓಂ ॥ 3-1-5 ॥

'ಏತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ' ಎಂದು ಉಪಕ್ರಮದಲ್ಲಿ ಜೀವನು ಭೂತಸಹಿತನಾಗಿರುವನೆಂದು ಶ್ರುತವಾಗಿಲ್ಲದಿರುವುದರಿಂದ ಭೂತಸಹಿತನಾಗಿ ಜೀವನು ಹೋಗುವುದಿಲ್ಲ ಎಂದು ಹೇಳಬಾರದು. ಅಲ್ಲಿ ಪ್ರಸ್ತುತವಾದ ಜಲವೇ ಶ್ರದ್ಧಾಶಬ್ದದಿಂದ ಹೇಳಲ್ಪಟ್ಟಿದೆ. ಇಲ್ಲದಿದ್ದರೆ 'ಆಪಃ ಪುರುಷವಚಸೋ ಭವಂತಿ' ಎಂಬ ಉಪಸಂಹಾರವು ಅನುಪಪನ್ನವಾಗುವುದು.

# ಅಶ್ರುತತ್ವಾಧಿಕರಣ

## ॥ ಓಂ ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ಓಂ ॥ 3-1-6 ॥

ಜೀವನು ಭೂತಸಹಿತನಾಗಿಯೇ ಹೋಗುವನೆಂದು ಹೇಳುವ ಶ್ರುತಿಗಳಿಲ್ಲವೆಂದು ತಿಳಿಯಬಾರದು. 'ಅಥೈನಂ ಕಿಂ ನ ಜಹಾತಿ...' ಎಂದು ಶ್ರುತಿಯು ಇರುವುದರಿಂದ ಕರ್ಮಗಳನ್ನು ಆಚರಿಸುವವರು ಭೂತಗಳೊಂದಿಗೆ ತೆರಳುವರೆಂದು ತಿಳಿಯುತ್ತದೆ.

**ಅಣುಭಾಷ್ಯ:- 'ಶುಭೇನ ಕರ್ಮಣಾ ಸ್ವರ್ಗಮ್'**

**ಭಾವಾರ್ಥ:-** ಈ ಆರು ಅಧಿಕರಣಗಳ ಸಾರವನ್ನು ಇಲ್ಲಿ ಸಂಗ್ರಹಿಸಿದ್ದಾರೆ. ಶುಭಕರ್ಮಗಳಿಂದ ಜೀವನು ಸ್ವರ್ಗವನ್ನು ಹೊಂದುವನು. ಮೋಕ್ಷವನ್ನು ಹೊಂದುವುದಿಲ್ಲ. ಕಾಮ್ಯಕರ್ಮಗಳಿಂದ ಮೋಕ್ಷವು ದೊರೆಯುವುದಿಲ್ಲ. ಮರಣಹೊಂದಿದಾಗ ಪಂಚಭೂತಗಳಿಂದ ರಹಿತನಾಗುವುದಿಲ್ಲ. ಭೂತಗಳೊಂದಿಗೆ ಸ್ವರ್ಗಕ್ಕೆ ಹೋಗುವನು. ಅವುಗಳೊಂದಿಗೇ ಹಿಂತಿರುಗುವನು. ಈ ಭೂತಗಳಿಂದ ಬಿಡುಗಡೆ ಮೋಕ್ಷದಲ್ಲಿಯೇ ಹೊರತಾಗಿ ಸ್ವರ್ಗಕ್ಕೆ ಹೋಗುವುದರಿಂದ ಅಲ್ಲ.

# ಭಾಕ್ತಾಧಿಕರಣ

## ॥ ಓಂ ಭಾಕ್ತಂ ವಾನಾತ್ಮವಿತ್ವಾತ್ ತಥಾ ಹಿ ದರ್ಶಯತಿ ಓಂ ॥ 3-1-7 ॥

'ಅಪಾಮ ಸೋಮಮಮೃತಾ ಅಭೂಮ' ಎಂದು ಕರ್ಮದಿಂದ ಅಮೃತತ್ವವು ಶ್ರುತವಾಗಿದೆ. ಆದರೆ ಇದು ಮುಖ್ಯವಾದ ಅಮೃತತ್ವವಲ್ಲ. ಕೇವಲ ಅಲ್ಪಕಾಲೀನವಾದುದು. ಆತ್ಮಜ್ಞಾನಿಗೆ ದೊರೆಯುವ ಅಮೃತತ್ವವೇ ಮುಖ್ಯಾಮೃತತ್ವ. 'ಅಮೃತೋ ವಾವ ಸೋಮಪೋ ಭವತಿ ಯಾವದಿಂದ್ರಃ' ಎಂಬ ಶ್ರುತಿಯು ಕರ್ಮದಿಂದ ದೊರೆಯುವ ಅಮೃತತ್ವಕ್ಕೆ ಅಲ್ಪಕಾಲೀನತ್ವವನ್ನು ಹೇಳುತ್ತಿದೆ. ಹೀಗೆ ಕರ್ಮವು ಮೋಕ್ಷಸಾಧನವಲ್ಲವಾದ್ದರಿಂದ ವೈರಾಗ್ಯವು ಅತ್ಯಂತ ಅವಶ್ಯವಾಗಿದೆ.

# ಕೃತ್ಯಾಧಿಕರಣ

## ॥ ಓಂ ಕೃತಾತ್ಯಯೇऽನುಶಯವಾನ್ ದೃಷ್ಟಸ್ಮೃತಿಭ್ಯಾಮ್ ಓಂ ॥ 3-1-8 ॥

ಕರ್ಮದಿಂದ ಸ್ವರ್ಗಾದಿಗಳನ್ನು ಕುರಿತು ತೆರಳಿದ ಜೀವಿಯು ಅಲ್ಲಿ ಕರ್ಮದ ಫಲವನ್ನು ಭೋಗಿಸಿ ಅಲ್ಪಕರ್ಮದಿಂದ ಸಹಿತನಾಗಿಯೇ ಹಿಂತಿರುಗಿಬರುತ್ತಾನೆ. 'ಭುಕ್ತಶೇಷಾನುಶಯವಾನ್ ಇಮಾಂ ಪ್ರಾಪ್ಯ ಭುವಂ ಪುನಃ' ಎಂದು ಪ್ರಮಾಣವಿದೆ.

# ಯಥೇತಾಧಿಕರಣ

## ॥ ಓಂ ಯಥೇತಮನೇವಂ ಚ ಓಂ ॥ 3-1-9 ॥

ಸ್ವರ್ಗಾದಿಗಳಿಗೆ ಹೋದಮಾರ್ಗದಿಂದಲೂ ಜೀವನು ಹಿಂತೆರಳುತ್ತಾನೆ. ಇತರ ಮಾರ್ಗದಿಂದಲೂ ಹಿಂತೆರಳುತ್ತಾನೆ.

**ಅಣುಭಾಷ್ಯ:- 'ಶುಭೇನ ಕರ್ಮಣಾ ಸ್ವರ್ಗಂ ಯಾತಿ'**

ಭಾವಾರ್ಥ:- ಸ್ವರ್ಗ ಹಾಗು ಅಸ್ವರ್ಗ ಎಂದು ಎರಡು ವಿಧವಾಗಿ ಪದಚ್ಛೇದ. ಅಸ್ವರ್ಗ ಎಂದರೆ ಭೂಲೋಕ. ಒಳ್ಳೆಯ ಕರ್ಮಗಳನ್ನು ಮಾಡುವುದರಿಂದ ಯಾವ ಮಾರ್ಗದಿಂದ ಸ್ವರ್ಗವನ್ನು ತೆರಳುತ್ತಾನೋ ಅದೇ ಮಾರ್ಗದಿಂದ ಆಕಾಶದವರೆಗೆ ಬಂದು ಅನಂತರ ಮಾರ್ಗಾಂತರದಿಂದ ಭೂಲೋಕಕ್ಕೆ ಹೋಗುತ್ತಾನೆ. 'ರಮಣೀಯಚರಣಾಃ ರಮಣೀಯಾಂ ಯೋನಿಮಾಪದ್ಯಂತೇ, ಕಪೂಯಚರಣಾಃ ಕಪೂಯಾಂ ಯೋನಿಮಾಪದ್ಯಂತೇ' ಮುಂತಾದ ಶ್ರುತಿಗಳು ಹೇಳುವಂತೆ ಗಮನಾಗಮನಗಳು ಆಚಾರದ ಫಲ ಹೊರತಾಗಿ ಕರ್ಮದ ಫಲವಲ್ಲ, ಆದ್ದರಿಂದ ಕರ್ಮದಲ್ಲಿ ವೈರಾಗ್ಯದ ಅಗತ್ಯವಿಲ್ಲ ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಚರಣಾಧಿ ಕರಣದಲ್ಲಿ ನೀಡಿದ್ದಾರೆ. ಅದರ ಅರ್ಥಸಂಗ್ರಹವನ್ನು 'ಶುಭೇನ ಕರ್ಮಣಾ ಸ್ವರ್ಗಂ ಯಾತಿ' ಎಂಬ ವಾಕ್ಯದಿಂದ ಮಾಡಿದ್ದಾರೆ.

ಸ್ವರ್ಗವನ್ನೇ ಆಗಲಿ ಅಸ್ವರ್ಗ = ಭೂಲೋಕಾದಿಗಳನ್ನೇ ಆಗಲಿ

ಯಜ್ಞಾದಿಕರ್ಮದಿಂದಲೇ ಹೋಗುತ್ತಾನೆ. ಹೊರತಾಗಿ ಆಚಾರದಿಂದ ಅಲ್ಲ. 'ರಮಣೀಯಚರಣಾಃ ರಮಣೀಯಾಂ ಯೋನಿಮಾಪದ್ಯಂತೇ' ಎಂಬ ಶ್ರುತಿಯಲ್ಲಿರುವ ಚರಣಶಬ್ದಕ್ಕೆ ಉತ್ತಮ ಆಚಾರಶೀಲರು ಮಾಡುವ ಯಜ್ಞಾದಿಕರ್ಮಗಳು ಎಂದು ಅರ್ಥ. ಅಥವಾ ಯಜ್ಞಾದಿಕಾಮ್ಯಕರ್ಮಗಳು ಎಂದು ಅರ್ಥ. ಆಗಮನಾದಿಗಳು ಯಜ್ಞವೇ ಮೊದಲಾದ ಶುಭಕರ್ಮದ ಫಲ. ಆದ್ದರಿಂದ ಕಾಮ್ಯವಾದ ಯಜ್ಞಾದಿಕರ್ಮದಲ್ಲಿ ವೈರಾಗ್ಯವು ಸಂಗತವಾಗಿದೆ. ಆದರೆ 'ಬಿಭ್ಯತ್ ಪತತಿ ಪಾದಪಾತ್' ಎಂಬ ನ್ಯಾಯದಂತೆ ಭಯವಿರುವವನು ಮರದಿಂದ ಬೀಳುತ್ತಾನೆ. ಪಾಪಕರ್ಮಮಾಡುವವನಿಗೆ ಪಾಪದ ಭಯವಿರುವುದಿಲ್ಲ. ಅವನು ಅಧಃಪತನಹೊಂದುವುದಿಲ್ಲ. ಆದ ಕಾರಣ ವಿರುದ್ಧಕರ್ಮದಲ್ಲಿ ವೈರಾಗ್ಯದ ಅಗತ್ಯವಿಲ್ಲ. ಈ ಆಶಂಕೆಯನ್ನು ಪರಿಹರಿಸಲು ಅನಿಷ್ಟಾಧಿಕರಣವು ಪ್ರವೃತ್ತವಾಗಿದೆ.

**ಅಣುಭಾಷ್ಯ:- 'ನಿರಯಂ ಚ ವಿಕರ್ಮಣಾ ಮಿಥ್ಯಾಜ್ಞಾನೇನ ಚ ತಮಃ'**

**ಭಾವಾರ್ಥ:-** ವಿಕರ್ಮಣಾ ಎಂಬಲ್ಲಿರುವ 'ವಿ' ಉಪಸರ್ಗವು ಅಭಾವ ಹಾಗು ವಿರುದ್ಧ ಎಂಬ ಎರಡು ಅರ್ಥವನ್ನು ಹೇಳುತ್ತಿದೆ. ನಾಮರೂಪಾದ್ ವಿಮುಕ್ತಃ' ಎಂದು ಷಟ್ಪ್ರಶ್ನಭಾಷ್ಯದಲ್ಲಿ ವಿ ಎಂಬುದಕ್ಕೆ ಅಭಾವಾರ್ಥವನ್ನು ಹೇಳಿದ್ದಾರೆ.

ಅನಿಷ್ಟಾಧಿಕಾರಿಗಳು ಎರಡು ವಿಧ. 1. ಅಜ್ಞಾನಿ, 2. ಮಿಥ್ಯಾಜ್ಞಾನಿ. ತನಗೆ ವಿಹಿತವಾದ ಕರ್ಮದ ಅನುಷ್ಠಾನವನ್ನು ಮಾಡದಿರುವುದರಿಂದ ಹಾಗು ಪಾಪಕರ್ಮದಿಂದಲೂ ಸಹ ನರಕವನ್ನು ಹೊಂದುತ್ತಾನೆ. ಶುಭಫಲ ದೊರೆಯದಿರುವುದು ಮಾತ್ರವಲ್ಲ. ನರಕವನ್ನೂ ಹೊಂದುತ್ತಾನೆ ಎಂದು 'ಚ'ಶಬ್ದದ ಅರ್ಥ.'ಮಿಥ್ಯಾಜ್ಞಾನೇನ ಚ ತಮಃ' ಎಂಬುದರಿಂದ ಮಿಥ್ಯಾಜ್ಞಾನಿಗೆ ಅಧಿಕಫಲವನ್ನು ಹೇಳುತ್ತಿದ್ದಾರೆ. ಮಿಥ್ಯಾಜ್ಞಾನಿಯು ನರಕವನ್ನು ಅನುಭವಿಸಿ ನಿತ್ಯನರಕವನ್ನು ಹೊಂದುತ್ತಾನೆ. ಆದ್ದರಿಂದ ಮಿಥ್ಯಾಜ್ಞಾನಕಾರಣವಾದ ವಿರುದ್ಧಕರ್ಮದಲ್ಲಿ ಕರ್ಮ ಅನನುಷ್ಠಾನದಲ್ಲಿಯೂ ವೈರಾಗ್ಯವನ್ನು ತಾಳಬೇಕು.

## ಚರಣಾಧಿಕರಣ

### ॥ ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ ॥ 3-1-10 ॥

'ರಮಣೀಯಚರಣಾ ರಮಣೀಯಾಂ ಯೋನಿಮಾಪದ್ಯಂತೇ' ಎಂಬ ಶ್ರುತಿಯಲ್ಲಿ ಯಜ್ಞಾಂಗವಾದ ಆಚಾರದಿಂದ ಉತ್ತಮಜನ್ಮವನ್ನು ಹೊಂದುತ್ತಾರೆಂದು ಹೇಳಿದ್ದರೂ ಅಲ್ಲಿ ಉಪಲಕ್ಷಣವಾಗಿ ಯಜ್ಞಾದಿಕರ್ಮಗಳನ್ನು ಸ್ವೀಕರಿಸಬೇಕೆಂದು ಕಾರ್ಷ್ಣಾಜಿನಿ ಆಚಾರ್ಯರು ಅಭಿಪ್ರಾಯಪಡುತ್ತಾರೆ.

## ಅನಿಷ್ಟಾಧಿಕರಣ

### ॥ ಓಂ ಅನಿಷ್ಟಾದಿಕಾರಿಣಾಮಪಿ ಚ ಶ್ರುತಮ್ ಓಂ ॥ 3-1-13 ॥

ಇಷ್ಟಾಪೂರ್ತಾದಿಗಳನ್ನು ಮಾಡಿದವರಿಗೆ ಮಾತ್ರವಲ್ಲ, ವಿರುದ್ಧವಾದ ಬ್ರಾಹ್ಮಣಹನನಾದಿಗಳನ್ನು ಮಾಡಿದವರಿಗೂ ಗಮನಾಗಮನಾದಿಗಳು ಇದೆ. 'ತದ್ಯ ಇಹ ಶುಭಕೃತೋ ಯೇ ಚಾಶುಭಕೃತೋ ಶುಭಮನುಭೂಯಾವರ್ತಂತೇ' ಎಂದು ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ.

## ಅಪಿಸಪ್ತಾಧಿಕರಣ

### ॥ ಓಂ ಅಪಿ ಸಪ್ತ ಓಂ ॥ 3-1-16 ॥

ಬ್ರಹ್ಮಹನನಾದಿಗಳ ಫಲವಾದದ್ದು ಐದು ಅನಿತ್ಯನರಕಗಳು. ಮಿಥ್ಯಾಜ್ಞಾನದ ಫಲ ತಾಮಿಸ್ರ-ಅಂಧತಾಮಿಸ್ರಗಳು. ಇವು ನಿತ್ಯ. ಹೀಗೆ ಒಟ್ಟು ಏಳು ನರಕಗಳು. ಆದ್ದರಿಂದ ನರಕಭೋಗವನ್ನು ನಿತ್ಯವೆಂದು ಹಾಗು ಅನಿತ್ಯವೆಂದೂ ಪ್ರತಿಪಾದಿಸುವ ಶ್ರುತಿಗಳಿಗೆ ವಿರೋಧವಿಲ್ಲ.

**ಅಣುಭಾಷ್ಯ:- 'ನಿರಯಂ ಚ ವಿಕರ್ಮಣಾ'**

**ಭಾವಾರ್ಥ:-** ಶಾಸ್ತ್ರವಿಹಿತವಾದ ಕರ್ಮವನ್ನು ಆಚರಿಸದ, ನಿಷಿದ್ಧವಾದದ್ದನ್ನು ಅನುಷ್ಠಾನ ಮಾಡುವ, ಭಗವದ್ವಿಮುಖನಾಗಿ ಕಾಮಕ್ರೋಧಾದಿಗಳಿಂದ ಆಚರಿಸಿದ

ಕರ್ಮದಿಂದ ಪುರುಷನು ರೌರವಾದಿ ನರಕಗಳನ್ನು ಕುರಿತು ಹೋಗುತ್ತಾನೆ. ಅಲ್ಲಿಂದ ಹಿಂತಿರುಗಿ ಪುನಃ ಈ ಮನುಷ್ಯಲೋಕವನ್ನು ಹೊಂದುತ್ತಾನೆ. ಹೀಗೆ ಮತ್ತೆಮತ್ತೆ ತಿರುಗುತ್ತಲೇ ಇರುತ್ತಾನೆಂದೂ 'ಚ'ಶಬ್ದದಿಂದಲೇ ಸೂಚಿಸಿದ್ದಾರೆ.

## ತತ್ರಾಪ್ಯಧಿಕರಣ

ನರಕವನ್ನು ದುಃಖಾತ್ಮಕ ಎಂದು ಅಂಗೀಕರಿಸಲು ಸಾಧ್ಯವಿಲ್ಲ. ಏಕೆಂದರೆ ಅಲ್ಲಿಯೂ ಪ್ರೇರಕನಾಗಿ ಈಶ್ವರನ ಉಪಸ್ಥಿತಿಯು ಅನಿವಾರ್ಯ. ಅಲ್ಲಿ ಈಶ್ವರನಿಲ್ಲ ಎಂದರೆ ಅವನು ಎಲ್ಲದಕ್ಕೂ ಪ್ರೇರಕ ಎಂಬ ವಚನದ ವಿರೋಧ ಉಂಟಾಗುವುದು. ಪ್ರೇರಕನಾಗಿ ಈಶ್ವರನು ಅಲ್ಲಿದ್ದಾನೆ ಎಂದರೆ ಪರಮಾತ್ಮನಿಗೂ ದುಃಖ ಉಂಟಾಗಬೇಕಾದೀತು. ಆದ್ದರಿಂದ ನರಕವನ್ನು ದುಃಖರೂಪವೇ ಅಲ್ಲ ಎಂದು ಒಪ್ಪುವುದು ಅನಿವಾರ್ಯ. ಆದಕಾರಣ ನರಕಸಾಧನವಾದ ವಿಕರ್ಮದಲ್ಲಿ ವೈರಾಗ್ಯದ ಅಗತ್ಯವಿಲ್ಲ. ಈ ಆಕ್ಷೇಪಕ್ಕೆ ಸಮಾಧಾನವಾಗಿ ಸೂತ್ರವು ಪ್ರವೃತ್ತವಾಗಿದೆ-

**ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ ॥ 3-1-17 ॥**

**ಅಣುಭಾಷ್ಯ:- 'ನಿರಯಂ ಚ ವಿಕರ್ಮಣಾ'**

**ಭಾವಾರ್ಥ:-** ವಿಕರ್ಮಣಾ = ವಿ ಶಬ್ದದಿಂದ ವಾಚ್ಯನಾದ ಶ್ರೀಹರಿಯ, ಕರ್ಮಣಾ=ಪ್ರೇರಣಾರೂಪವ್ಯಾಪಾರದಿಂದ ಜೀವನು ನರಕವನ್ನು ಹೊಂದುತ್ತಾನೆ. ಕೇವಲ ಇತರ ಅವಸ್ಥೆಗಳಲ್ಲಿ ಮಾತ್ರವಲ್ಲ. ನರಕದುಃಖವನ್ನು ಕೂಡ ಈಶ್ವರಪ್ರೇರಣೆಯಿಂದಲೇ ಜೀವನು ಅನುಭವಿಸುತ್ತಾನೆ. 'ಸ ಸ್ವರ್ಗೇ ಸ ಭೂಮೌ ಸ ನರಕೇ ಸೋಽಂಧೇತಮಸಿ...' ಎಂಬ ಶ್ರುತಿಯು ಈಶ್ವರನು ನರಕದಲ್ಲಿಯೂ ನಿಯಾಮಕನೆಂದು ಹೇಳುತ್ತಿದೆ. ನರಕದಲ್ಲಿದ್ದರೂ ತಾನು ಈಶ್ವರನಾದ್ದರಿಂದಲೇ ಭಗವಂತನಿಗೆ ದುಃಖಭೋಗವಿಲ್ಲ. ಆದ್ದರಿಂದ ಈಶ್ವರನಿಗೂ ದುಃಖ ಉಂಟಾಗಲಿ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಹೀಗೆ ನರಕವು ದುಃಖರೂಪವಾದ್ದರಿಂದ ವೈರಾಗ್ಯವು ಅತ್ಯಂತ ಅವಶ್ಯವಾಗಿದೆ.

## ವಿದ್ಯಾಧಿಕರಣ

### ।। ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ ।। 3-1-18 ।।

'ಅಥ ಏತಯೋಃ ಪಥೋರ್ನ ಕತರೇಣ ಚ' ಈ ಶ್ರುತಿಯಿಂದ ಜೀವರಿಗೆ ಗಮನದಲ್ಲಿ ಸ್ವಾತಂತ್ರ್ಯವಿದೆ ಎಂದು ತಿಳಿಯಬಾರದು. ಶ್ರುತಿಯಲ್ಲಿರುವ 'ಏತಯೋಃ ಪಥೋಃ' ಎಂಬುದಕ್ಕೆ ಪಿತೃಯಾನಾದಿಮಾರ್ಗಗಳು ಎಂದು ಅರ್ಥವಲ್ಲ, ವಿದ್ಯಾಕರ್ಮಗಳು ಎಂದು ಅರ್ಥ. ಏಕೆಂದರೆ ಹಿಂದೆ ಅವುಗಳೇ ಪ್ರಕೃತವಾಗಿವೆ.

## ನ ತೃತೀಯಾಧಿಕರಣ

### ।। ಓಂ ನ ತೃತೀಯೇ ತಥೋಪಲಬ್ಧೇಃ ಓಂ ।। 3-1-19 ।।

ಅಂಧಂತಮಸ್ಸಿನಲ್ಲಿ ಸುಖಲೇಶವೂ ಇಲ್ಲ. ಇದು ಕೇವಲ ಸುಖರೂಪವಾಗಿದೆ. 'ನ ತಮಃ ಸುಖಾನುವೃತ್ತಂ ಕೇವಲಂ ಹ್ಯೇವಾತ್ರ ದುಃಖಂ ಭವತಿ' ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ.

**ಅಣುಭಾಷ್ಯ:- 'ಮಿಥ್ಯಾಜ್ಞಾನೇನ ಚ ತಮಃ'**

**ಭಾವಾರ್ಥ:-** ಅಬ್ರಹ್ಮವನ್ನು ಬ್ರಹ್ಮವೆಂದು, ಸತ್ಯವನ್ನು ಮಿಥ್ಯಾ ಎಂದು, ಸರೂಪವನವನ್ನು ನಿರೂಪವೆಂದು, ಸವಿಶೇಷವನ್ನು ನಿರ್ವಿಶೇಷವೆಂದು, ಸಗುಣವಾದದ್ದನ್ನು ನಿರ್ಗುಣವೆಂದು ಭಾವಿಸುವ ಹರಿದ್ವೇಷಿಯು ಈ ಅನ್ಯಥಾಜ್ಞಾನದಿಂದ ನಿತ್ಯನರಕವನ್ನು ಹೊಂದುವನು. ಇಲ್ಲಿ ಸುಖಲೇಶವೂ ಇಲ್ಲ. ದುಃಖಹ್ರಾಸವೂ ಇಲ್ಲ. ಇತ್ಯಾದಿ ವಿಶೇಷಗಳನ್ನು 'ಮಿಥ್ಯಾಜ್ಞಾನೇನ ಚ' ಎಂಬಲ್ಲಿರುವ 'ಚ'ಶಬ್ದದಿಂದ ಸಂಗ್ರಹಿಸಿದ್ದಾರೆ.

## ತತ್ಸ್ವಾಭಾವ್ಯಾಪತ್ತ್ಯಧಿಕರಣ

### ।। ಓಂ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ ।। 3-1-24 ।।

'ಧೂಮೋ ಭೂತ್ವಾ ಅಭ್ರಂ ಭವತಿ' ಮುಂತಾದ ಶ್ರುತಿಗಳಲ್ಲಿ

ಧೂಮವಾಗುತ್ತಾರೆ ಎಂದರೆ ಧೂಮಾದಿದೇವತೆಗಳಾಗುತ್ತಾರೆ ಎಂದು ಅರ್ಥವಲ್ಲ. ಧೂಮಾದಿದೇವತೆಗಳ ಸ್ವಭಾವ ಸದೃಶವಾದ ಸ್ವಭಾವವನ್ನು ಹೊಂದುತ್ತಾರೆ ಎಂದು ಅಭಿಪ್ರಾಯ. ಏಕೆಂದರೆ ಐಕ್ಯವು ಅಸಂಭಾವಿತ. ಆ ದೇವತೆಗಳ ಪದವಿಯು ನಿಯತಾಧಿಕಾರಿಗಳಿಂದ ಮಾತ್ರ ಪ್ರಾಪ್ಯವಾದದ್ದಾಗಿದೆ.

**ಅಣುಭಾಷ್ಯ:- 'ಜ್ಞಾನೇನೈವ ಪರಂ ಪದಮ್'**

ಭಾವಾರ್ಥ:- ಭಗವಂತನ ಜ್ಞಾನದಿಂದ ಮಾತ್ರ ಉತ್ತಮವಾದ ಪದವಿಯನ್ನು ಯೋಗ್ಯತೆ ಇರುವವರು ಹೊಂದುವರು. ಆದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯವು ಆವಶ್ಯಕವಾಗಿದೆ.

## ನಾತಿಚಿರೇಣಾಧಿಕರಣ

### ॥ ಓಂ ನಾತಿಚಿರೇಣ ವಿಶೇಷಾತ್ ಓಂ ॥ 3-1-25 ॥

'ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯಂತೇ' ಎಂದು ಶ್ರುತಿ ಇರುವುದರಿಂದ ಕರ್ಮಾನುಷ್ಠಾತೃಗಳು ಸ್ವರ್ಗವಾಸ ಮುಗಿದ ಕೂಡಲೇ ಅತಿವಿಲಂಬವಿಲ್ಲದೆ ಹಿಂತಿರುಗಿ ಜನ್ಮವನ್ನು ಪಡೆಯುವರು.

**ಅಣುಭಾಷ್ಯ:- 'ಶುಭೇನ ಕರ್ಮಣಾ ಸ್ವರ್ಗಮ್'**

**ಭಾವಾರ್ಥ:-** ಸ್ವರ್ಗಸುಖವನ್ನು ಅನುಭವಿಸಿದ ಜೀವಿಯು ಶೀಘ್ರದಲ್ಲೇ ಕರ್ಮಸಹಿತನಾಗಿಯೇ ಅಸ್ವರ್ಗಂ = ಸ್ವರ್ಗಕ್ಕಿಂತ ಭಿನ್ನವಾದ ಭೂಲೋಕವನ್ನು ಹೊಂದುತ್ತಾನೆ.

## ಅನ್ಯಾಧಿಕರಣ

### ॥ ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ ॥ 3-1-26 ॥

'ತ ಇಹ ವ್ರೀಹಿಯವಾಃ ಓಷಧಿವನಸ್ಪತಯಸ್ತಿಲಾ ಮಾಷಾ ಇತಿ ಜಾಯಂತೇ' ಎಂಬ ಶ್ರುತಿಯು ಸ್ವರ್ಗದಿಂದ ಹಿಂತಿರುಗಿ ಬಂದ ಕರ್ಮಿಗೆ ವ್ರೀಹ್ಯಾದಿಭಾವವನ್ನು

ಹೇಳಿದೆ. ಇದರಿಂದ ಕರ್ಮಿಗೆ ದುಃಖವಿದೆ ಎಂದು ಆಶಂಕಿಸಬಾರದು. ಇಲ್ಲಿ ವ್ರೀಹ್ಯಾದಿಭಾವವೆಂದರೆ ಮತ್ತೊಬ್ಬ ಜೀವನಿಂದ ಅಧಿಷ್ಠಿತವಾದ ವ್ರೀಹ್ಯಾದಿದೇಹದಲ್ಲಿ ಕೇವಲ ಪ್ರವೇಶವಷ್ಟೆ.

**ಅಣುಭಾಷ್ಯ:-** **'ಶುಭೇನ ಕರ್ಮಣಾ ಸ್ವರ್ಗಂ ಯಾತಿ'**

**ಭಾವಾರ್ಥ:-** ಶುಭಕರ್ಮದಿಂದ ಯಾವರೀತಿ ಸ್ವರ್ಗಸುಖವನ್ನು ಅನುಭವಿಸುತ್ತಾನೋ ಹಾಗೆಯೇ ಶುಭಕರ್ಮದಿಂದಲೇ 'ಅಸ್ವರ್ಗಂ' = ವ್ರೀಹ್ಯಾದಿಸ್ಥಾನವನ್ನು ಹೊಂದುವನು.

## ರೇತೋಧಿಕರಣ

### ll ಓಂ ರೇತಸ್ಸಿಗ್ಯೋಗೋಽಥ ಓಂ ll 3-1-28 ll

ಸ್ವರ್ಗದಿಂದ ಹಿಂತಿರುಗಿದ ಜೀವಿಯು ಪಿತೃದೇಹವನ್ನು ಪ್ರವೇಶಿಸಿ ಅನಂತರದಲ್ಲಿಯೇ ಮಾತೃದೇಹವನ್ನು ಪ್ರವೇಶಿಸುವನು. ಇದರಿಂದ 'ಮಾತುರೇವೋದರಂ ವ್ರಜೇತ್' ಎಂಬುದರಿಂದ ವಿರೋಧವಿಲ್ಲ.

## ಯೋನ್ಯಧಿಕರಣ

### ll ಓಂ ಯೋನೇಃ ಶರೀರಮ್ ಓಂ ll 3-1-29 ll

ಪಿತೃವಿನ ಮೂಲಕ ಮಾತೃವಿನ ಶರೀರವನ್ನು ಪ್ರವೇಶಿಸಿದ ಜೀವಿಯು ಅಲ್ಲಿ ದೇಹವನ್ನು ಪಡೆಯುವನು. 'ದಿವಃ ಸ್ಥಾಸ್ನೂನ್ ಗಚ್ಛತಿ, ಸ್ಥಾಸ್ನುಭ್ಯಃ ಪಿತರಂ, ಪಿತುಃ ಮಾತರಂ, ಮಾತುಃ ಶರೀರಂ, ಶರೀರೇಣ ಜಾಯತೇ' ಎಂದು ಶ್ರುತಿಯು ಆಧಾರವಾಗಿದೆ. ಹೀಗೆ ಈ ಜನ್ಮಗಳೆಲ್ಲವೂ ಅತ್ಯಾಯಾಸಯುಕ್ತವಾದ್ದರಿಂದ ವೈರಾಗ್ಯವನ್ನು ಪಡೆದು ಭಗವಂತನ ಆರಾಧನೆಯನ್ನು ಮಾಡಬೇಕು.

**ಅಣುಭಾಷ್ಯ:-** **'ಜ್ಞಾನೇನೈವ ಪರಂ ಪದಂ ಯಾತಿ'**

**ಭಾವಾರ್ಥ:-** ಈ ಎರಡು ಅಧಿಕರಣಗಳ ಸಾರವನ್ನು ಈ ವಾಕ್ಯದಿಂದ ಸಂಗ್ರಹಿಸಿದ್ದಾರೆ. ಶುಕಾಚಾರ್ಯರೇ ಮುಂತಾದವರನ್ನು ಮಾತಾಪಿತೃಗಳ

ಶರೀರವನ್ನು ಪ್ರವೇಶಿಸಿದೆ ಜನ್ಮವನ್ನು ಪಡೆದಿರುವುದು ಅವರ ಜ್ಞಾನಸಾಮರ್ಥ್ಯದಿಂದ.

ಜ್ಞಾನದಿಂದ ಮಾತ್ರ ಉತ್ತಮವಾದ ಸ್ಥಾನದ ಪ್ರಾಪ್ತಿಯಾಗುವುದು. 'ಜ್ಞಾನೇನೈವ' ಎಂಬಲ್ಲಿ 'ಏವ'ಕಾರದಿಂದ ಕರ್ಮವು ಮೋಕ್ಷಸಾಧನವಲ್ಲ ಎಂದು ತಿಳಿಸಿದ್ದಾರೆ.

ವೈರಾಗ್ಯಕ್ಕೆ ಉಪಯುಕ್ತ ವಿಷಯಗಳನ್ನು ಪ್ರತಿಪಾದಿಸಿ ಉಪಸಂಹಾರವನ್ನು ಮಾಡುತ್ತಿದ್ದಾರೆ.

**ಅಣುಭಾಷ್ಯ:- 'ತಸ್ಮಾದ್ ವಿರಕ್ತಃ ಸನ್ ಜ್ಞಾನಮೇವ ಸಮಾಶ್ರಯೇತ್'**

**ಭಾವಾರ್ಥ:-** ಕರ್ಮಾದಿಗಳು ಸ್ವರ್ಗಾದಿಗಳಿಗೆ ಮಾತ್ರ ಸಾಧನವಾಗಿದೆ ಹೊರತಾಗಿ ಮೋಕ್ಷಸಾಧನವಲ್ಲ. ಜ್ಞಾನವು ಮಾತ್ರ ಮೋಕ್ಷಸಾಧನವಾಗಿದೆ. ಆದ್ದರಿಂದ ಕಾಮ್ಯಕರ್ಮಾದಿಗಳಲ್ಲಿ ವೈರಾಗ್ಯವನ್ನು ಹೊಂದಿ ಜ್ಞಾನಮಾರ್ಗವನ್ನೇ ಅನುಸರಿಸಬೇಕು.

## ದ್ವಿತೀಯಪಾದ

ಪ್ರಥಮಪಾದದಲ್ಲಿ ಮರಣ ಹೊಂದಿದ ಜೀವನ ಗಮನಾಗಮನ, ಸ್ವರ್ಗ, ನರಕ, ಗರ್ಭವಾಸಾದಿಗಳ ಸ್ವರೂಪವನ್ನು ಹೇಳಿದರು. ಇದರಿಂದ ವೈರಾಗ್ಯವು ಉಂಟಾಗುವುದು. ಆದರೆ ಭಕ್ತಿಯು ಇರುವವನಿಗೆ ಮಾತ್ರ ಶ್ರವಣ, ಮನನಾದಿಗಳಿಂದ ಶ್ರೀಹರಿಯ ಅಪರೋಕ್ಷಜ್ಞಾನ ಉಂಟಾಗುವುದು. ಆ ಭಕ್ತಿಯನ್ನು ನಿರೂಪಿಸಲು ಈ ಎರಡನೆಯ ಪಾದವು ಪ್ರವೃತ್ತವಾಗಿದೆ. ವಿಸ್ತರಭಾಷ್ಯದಲ್ಲಿ ''ಭಕ್ತಿರಸ್ಮಿನ್ ಪಾದೇ ಉಚ್ಯತೇ'' ಎಂದು ಇದನ್ನು ಸ್ಪಷ್ಟಪಡಿಸಿದ್ದಾರೆ.

**ಪ್ರಶ್ನೆ -** 'ಭಕ್ತಿಯನ್ನು ಹೇಳುತ್ತಾರೆ' ಎಂಬ ವಾಕ್ಯಕ್ಕೆ ಅರ್ಥವೇನು? ಭಕ್ತಿಯನ್ನು ಮಾಡಬೇಕು ಎಂದು ವಿಧಿಸುತ್ತಿದ್ದಾರೆ ಎಂದು ಅಭಿಪ್ರಾಯವೋ? ಅಥವಾ ಭಕ್ತಿಯ ಸ್ವರೂಪವನ್ನು ಹೇಳುತ್ತಾರೆ ಎಂದು ಅಭಿಪ್ರಾಯವೋ? ಯಾವುದು ಪ್ರಯತ್ನಾರ್ಹವೋ ಅದು ವಿಧೇಯ. ಆದರೆ ಭಕ್ತಿಯು

ಪ್ರಯತ್ನಾರ್ಹವಲ್ಲವಾದ್ದರಿಂದ ವಿಧೇಯವಲ್ಲ. ಭಗವಂತನ ಮಹಿಮೆಯನ್ನು ಹೇಳುತ್ತಿದ್ದಾರೆ ಹೊರತಾಗಿ ಭಕ್ತಿಯನ್ನು ನಿರೂಪಿಸಿಲ್ಲವಾದ್ದರಿಂದ ಎರಡನೆಯ ಪಕ್ಷವೂ ಸರಿಯಲ್ಲ.

**ಉತ್ತರ** - ಭಕ್ತಿಯು ಮೂಡಿಬರಲೆಂದು ಭಗವಂತನ ಮಹಿಮೆಯನ್ನು ಹೇಳುತ್ತಿದ್ದಾರೆ. ಭಕ್ತಿಮೂಡಲು ಮಹಿಮೆಯ ತಿಳುವಳಿಕೆಯು ಕಾರಣ. ಭಕ್ತಿಯಲ್ಲಿ ಮಹಿಮೆಯ ಉಪಯೋಗವಿಲ್ಲವೆಂಬ ಆಶಂಕೆಯನ್ನು ಪರಿಹರಿಸಲು ''ವಿರಕ್ತಃ ಸನ್ ಜ್ಞಾನಮೇವ ಸಮಾಶ್ರಯೇತ್'' ಎಂಬ ಹಿಂದಿನ ವಾಕ್ಯವನ್ನು ಇಲ್ಲಿಯೂ ಯೋಜಿಸಬೇಕು. ಈ ವಾಕ್ಯದಲ್ಲಿರುವ 'ಸನ್' ಎಂಬ ಶತೃಪ್ರತ್ಯಯಾಂತ ಶಬ್ದವು ಕಾರಣಾರ್ಥದಲ್ಲಿದೆ. ಉದಾಹರಣೆಗೆ - 'ಅರ್ಜಯನ್ ವಸತಿ'. ಇಲ್ಲಿ ಅರ್ಜನೆಯು(ಸಂಪಾದನೆಯು) ವಾಸಕ್ಕೆ ಕಾರಣ ಎಂದು ಅರ್ಥವು ಪ್ರತೀತವಾಗುತ್ತಿದೆ. ವಿರಕ್ತಃ ಸನ್ = ವಿಶಬ್ದವಾಚ್ಯನಾದ ಪರಮಾತ್ಮನಲ್ಲಿ ವಿಶೇಷವಾಗಿ ಅನುರಕ್ತನಾಗಲು ಭಕ್ತನಾಗಲು, ಜ್ಞಾನಮೇವ = ಭಗವಂತನ ಮಹಿಮೆಯ ಜ್ಞಾನವನ್ನೇ, ಸಮಾಶ್ರಯೇತ್ = ಆಶ್ರಯಿಸಬೇಕು.

''ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।
ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನಚಾನ್ಯಥಾ'' ॥

ಮಾಹಾತ್ಮ್ಯಜ್ಞಾನಪೂರ್ವಕವಾದ ಸ್ನೇಹವೇ ಭಕ್ತಿ. ಮಾಹಾತ್ಮ್ಯವನ್ನು ಹೇಳದಿದ್ದಲ್ಲಿ ಜ್ಞಾನವುಂಟಾಗಲಾರದು. ಸ್ನೇಹವೂ ಮೂಡುವುದಿಲ್ಲ. ಅದಕ್ಕಾಗಿಯೇ ಈ ಪಾದದಲ್ಲಿ ಈಶ್ವರನ ಮಾಹಾತ್ಮ್ಯವನ್ನು ಬಣ್ಣಿಸುತ್ತಿದ್ದಾರೆ. ಹೆಂಡತಿ, ಮಕ್ಕಳು ಮುಂತಾದವರಲ್ಲಿ ಮಾಹಾತ್ಮ್ಯಜ್ಞಾನವಿಲ್ಲದಿದ್ದರೂ ಸ್ನೇಹವು ಕಂಡಿದೆ. ಕೆಲವೊಮ್ಮೆ ಮಾಹಾತ್ಮ್ಯಜ್ಞಾನವಿದ್ದರೂ ಸ್ನೇಹವಿಲ್ಲದಿರುವುದೂ ಕಂಡಿದೆ. ಹೀಗೆ ಅನ್ವಯ-ವ್ಯತಿರೇಕ ವ್ಯಭಿಚಾರವು ಇರುವುದರಿಂದ ಮಾಹಾತ್ಮ್ಯಜ್ಞಾನವು ಹೇಗೆ ಕಾರಣವಾಗುವುದು? ಎಂಬ ಆಕ್ಷೇಪವನ್ನು 'ಏವ' ಶಬ್ದದಿಂದ ಪರಿಹರಿಸಿದ್ದಾರೆ. ಕಾರೀರಿಯಾಗ ಮಾಡದಿದ್ದರೂ ಮಳೆಯಾಗುವುದು ಕಂಡಿದೆ. ಅದರಿಂದ ಕಾರೀರಿಯಾಗವು ವೃಷ್ಟಿಗೆ ಕಾರಣವಲ್ಲ ಎಂದು ಹೇಳಬಾರದು. ಮಾಹಾತ್ಮ್ಯ ಜ್ಞಾನವು ಇರುವ ವ್ಯಕ್ತಿಗೆ ಮಾತ್ಸರ್ಯಾದಿದೋಷಗಳಿದ್ದಲ್ಲಿ ಪ್ರತಿಬಂಧಕ ವಿರುವುದರಿಂದ ಸ್ನೇಹ ಉತ್ಪತ್ತಿಯಾಗದಿರಬಹುದು. ಆಗ ಮಾಹಾತ್ಮ್ಯಜ್ಞಾನವು

ಕಾರಣವೇ ಅಲ್ಲ ಎಂದು ಅರ್ಥವಲ್ಲ. ಪ್ರತಿಬಂಧಕ ನಿವೃತ್ತಿಹೊಂದಿದಾಗ ಅವನಿಗೆ ಸ್ನೇಹವು ಉಂಟಾಗುತ್ತದೆ. ಆದ್ದರಿಂದ ಅನ್ವಯ- ವ್ಯತಿರೇಕ ವ್ಯಭಿಚಾರಗಳಿಲ್ಲ.

ಪ್ರಥಮಾಧ್ಯಾಯದಲ್ಲಿ ಎಲ್ಲವೂ ಈಶ್ವರಾಧೀನ ಎಂದಿದ್ದಾರೆ. ಆದರೆ ಅದು ಸರಿಯಲ್ಲ. ಸ್ವಾಪ್ನಪದಾರ್ಥಗಳು ಸತ್ಯವಲ್ಲ. ಸ್ವಪ್ನದಲ್ಲಿ ಗಜ-ತುರಗಾದಿಗಳ ಪ್ರತೀತಿಯು ಅಜ್ಞಾನಾಧೀನವಾಗಿದೆ. ಆದ್ದರಿಂದ ಸ್ವಾಪ್ನಪದಾರ್ಥಗಳಾಗಲೀ ಅಥವಾ ಅವುಗಳ ಪ್ರತೀತಿಯಾಗಲೀ ಈಶ್ವರಾಧೀನವಲ್ಲ. ಅವುಗಳು ಅಸತ್ಯವಾದ್ದರಿಂದ ಸ್ವಾಪ್ನಪದಾರ್ಥಗಳ ತಿರೋಧಾನವು ಈಶ್ವರಾಧೀನವಲ್ಲ. ಜಾಗ್ರತ್, ಸುಷುಪ್ತಿ ಅವಸ್ಥೆಗಳೂ ಕಾಲಾದಿಗಳ ಅಧೀನವಾಗಿರುವುದು ಅನುಭವಸಿದ್ಧವಾಗಿದೆ. ಆದ್ದರಿಂದ ಅವುಗಳೂ ಈಶ್ವರಾಧೀನವಲ್ಲ.

''ಸತಾ ಸೋಮ್ಯ ತದಾ ಸಂಪನ್ನೋ ಭವತಿ'' ಎಂಬ ಶ್ರುತಿಯು ಸುಷುಪ್ತಿಯಲ್ಲಿ ಜೀವನಿಗೆ ಪರಮಾತ್ಮನ ಪ್ರಾಪ್ತಿಯನ್ನು ಹೇಳಿದೆ. ಆದ್ದರಿಂದ ಈಶ್ವರಾಧೀನನೆಂದು ಹೇಳಿದರೆ; ''ನಾಡೀಷು ಸುಪ್ತೋ ಭವತಿ'' ಎಂಬ ಶ್ರುತಿಯ ವಿರೋಧ ಬರುತ್ತದೆ. ಭೇರಿತಾಡನಾದಿಗಳಿಂದ ಪ್ರಬೋಧ ಮತ್ತು ಮೂರ್ಛೆಗಳೂ ಉಂಟಾಗುತ್ತವೆ. ಆದ್ದರಿಂದ ಅವುಗಳೂ ಸಹ ಈಶಾಧೀನವಲ್ಲ. ಮೂರ್ಛಾವಸ್ಥೆಯಲ್ಲಿ ಜೀವನು ಎಲ್ಲಿರುವನು. ಕಣ್ಣುಗಳಲ್ಲಿದ್ದರೆ ಅದೂ ಜಾಗ್ರದವಸ್ಥೆಯೇ ಆಗುವುದು. ಪರಮಾತ್ಮನಲ್ಲಿರುವುದಾದರೆ ಅದೂ ಸುಷುಪ್ತಿ ಅವಸ್ಥೆಯೇ ಆಗುವುದು. ಒಟ್ಟಾರೆ ಮೂರ್ಛೆಯು ಪ್ರತ್ಯೇಕ ಅವಸ್ಥೆಯೇ ಅಲ್ಲ. ಈ ಎಲ್ಲ ಆ ಶಂಕೆಗಳನ್ನು ಪರಿಹರಿಸಲು ಕೆಳಗಿನ ಅಧಿಕರಣಗಳು ಪ್ರವೃತ್ತವಾಗಿದೆ.

## ಸಂಧ್ಯಾಧಿಕರಣ

### ।। ಸಂಧ್ಯೇ ಸೃಷ್ಟಿರಾಹ ಹಿ ಓಂ ।। 3-2-1 ।।

ಜಾಗ್ರತ್ ಸ್ವಪ್ನಗಳ ಸಂಧಿಕಾಲದಲ್ಲಿ ತೋರುವ ಸ್ವಾಪ್ನಪದಾರ್ಥಗಳ ಸೃಷ್ಟಿ ಮತ್ತು ನಿರೋಧ ಭಗವಂತನಿಂದಲೇ ಆಗುವುದು. 'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' ಎಂಬ ಶ್ರುತಿಯು ಇದನ್ನು ಹೇಳುತ್ತಿದೆ. ಅಲ್ಲಿ ವಾಸನಾರೂಪ ಸಂಸ್ಕಾರವೇ ಉಪಾದಾನಕಾರಣ. ಆದ್ದರಿಂದ ಸ್ವಾಪ್ನಪದಾರ್ಥಗಳು ಸತ್ಯ.

## ಪರಾಭಿಧ್ಯಾನಾಧಿಕರಣ

### ॥ ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ ॥ 3-2-5 ॥

ಸ್ವಪ್ನತಿರೋಧಾನವೂ ಈಶ್ವರನ ಇಚ್ಛೆಯಿಂದಲೇ ಆಗುವುದು, ಜಾಗೃತಿಯಿಂದ ಅಲ್ಲ. 'ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ' ಎಂಬ ವಚನದಂತೆ ಈಶ್ವರೇಚ್ಛೆಯಿಂದಲೇ ಬಂಧಮೋಕ್ಷಗಳು. ಆದ್ದರಿಂದ ಸ್ವಪ್ನದ ಆವಿರ್ಭಾವ ತಿರೋಧಾನಗಳೆರಡೂ ಈಶ್ವರಾಧೀನವೇ, ಅಜ್ಞಾನಾಧೀನವಲ್ಲ.

## ದೇಹಯೋಗಾಧಿಕರಣ

### ॥ ಓಂ ದೇಹಯೋಗಾದ್ವಾಸೋಽಪಿ ಓಂ ॥ 3-2-6 ॥

'ಸ ಏವ ಜಾಗರಿತೇ ಸ್ಥಾಪಯತಿ ಸ್ವಪ್ನೇ ಸ ಪ್ರಭುಃ' ಎಂದು ಶ್ರುತಿಯು ಇರುವುದರಿಂದ ದೇಹಾಭಿಮಾನರೂಪವಾದ ಜಾಗ್ರದವಸ್ಥೆಯು ಭಗವಂತನ ಅಧೀನವೇ ಆಗಿದೆ. ಕಾಲವು ಅಚೇತನವಾದ್ದರಿಂದ ಅಸ್ವತಂತ್ರ. ಆದಕಾರಣ ಕಾಲಾಧೀನವಲ್ಲ.

## ತದಭಾವಾಧಿಕರಣ

### ॥ ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ ॥ 3-2-7 ॥

ಜಾಗ್ರತ್-ಸ್ವಪ್ನಗಳ ಅಭಾವವೇ ಸುಷುಪ್ತಿ. ಜೀವನಿಗೆ ಈ ಸುಷುಪ್ತಿಯು ನಾಡಿಯಲ್ಲಿರುವ ಪರಮಾತ್ಮನಲ್ಲಿ ಸಂಭವಿಸುವುದು. 'ಆಸು ತದಾ ನಾಡೀಷು ಸುಪ್ತೋ ಭವತಿ', 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' ಎಂದು ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ. ಪರಮಾತ್ಮನಲ್ಲೇ ಸುಪ್ತಿ ಆದ್ದರಿಂದ ಜೀವನಿಗೆ ದುಃಖಾನುಭವವಿಲ್ಲ.

## ಪ್ರಬೋಧಾಧಿಕರಣ

### ॥ ಓಂ ಅತಃ ಪ್ರಬೋಧೋಽಸ್ಮಾತ್ ಓಂ ॥ 3-2-8 ॥

ಜೀವನಿಗೆ ಈಶ್ವರನಲ್ಲೇ ಸುಷುಪ್ತಿಯಾದ್ದರಿಂದ ಅವನ ಪ್ರೇರಣೆಯಿಂದಲೇ ಎಚ್ಚರಗೊಳ್ಳುವನು. 'ಏಷ ಏವ ಸುಪ್ತಂ ಪ್ರಬೋಧಯತಿ, ಏತಸ್ಮಾಜ್ಜೀವ ಉತ್ತಿಷ್ಠತಿ' ಎಂದು ಶ್ರುತಿ ಇದೆ. ಆದ್ದರಿಂದ ಭೇರಿತಾಡನಾದಿಗಳು ನಿಮಿತ್ತಮಾತ್ರ.

**ಅಣುಭಾಷ್ಯ:- 'ಸರ್ವಾವಸ್ಥಾಪ್ರೇರಕಶ್ಚ'**

**ಭಾವಾರ್ಥ:-** ಎಲ್ಲ ಜೀವಿಗಳಿಂದಲೂ ಅನುಭವಿಸಲ್ಪಡುವ ಸ್ವಪ್ನ, ಜಾಗೃತಿ, ಸುಷುಪ್ತಿ, ಮೋಹ ಈ ಎಲ್ಲಾ ಅವಸ್ಥೆಗಳನ್ನು ತೈಜಸ, ವಿಶ್ವ, ಪ್ರಾಜ್ಞರೂಪಗಳಿಂದ ಭಗವಂತನೇ ಪ್ರೇರಿಸುವನು. 'ಪ್ರೇರಕಶ್ಚ' ಎಂಬಲ್ಲಿ 'ಚ' ಶಬ್ದದಿಂದ ಆ ಅವಸ್ಥೆಗಳ ನಿವರ್ತಕನೂ ಅವನೇ ಎಂದು ಸೂಚಿಸಿದ್ದಾರೆ. ಸಮಸ್ತಪ್ರವೃತ್ತಿನಿವೃತ್ತಿಗಳೆಲ್ಲವೂ ಅವನ ಇಚ್ಛಾಧೀನವಾಗಿದೆ. ಸಂಸಾರಾವಸ್ಥೆಯ ಪ್ರವರ್ತಕನೂ ಭಗವಂತನೇ ಆಗಿದ್ದಾನೆ. ಅದನ್ನು ನಿವೃತ್ತಿಗೊಳಿಸಿ ಮೋಕ್ಷಾವಸ್ಥೆಯನ್ನು ನೀಡುವವನೂ ವಾಸುದೇವರೂಪೀ ಪರಮಾತ್ಮನೇ.

## ಕರ್ಮಾನುಸ್ಮೃತ್ಯಧಿಕರಣ

**॥ ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ ॥ 3-2-9 ॥**

ಪರಮಾತ್ಮನೇ ಎಲ್ಲ ಜೀವಿಗಳಿಗೂ ಎಲ್ಲ ಕಾಲ-ದೇಶಗಳಲ್ಲೂ ಸರ್ವಾವಸ್ಥಾ ಪ್ರೇರಕನು. 'ಏಷ ಹ್ಯೇವ ಸಾಧು ಕರ್ಮ ಕಾರಯತಿ', 'ಏಷ ಹ್ಯೇವಾಸಾಧುಕರ್ಮ ಕಾರಯತಿ' ಎಂಬ ಶ್ರುತಿಯು ಎಲ್ಲ ಕರ್ಮಗಳು ಭಗವಂತನ ಅಧೀನವೆಂದು ಹೇಳುತ್ತಿದೆ.

**ಅಣುಭಾಷ್ಯ:- 'ಸರ್ವಾವಸ್ಥಾಪ್ರೇರಕಶ್ಚ'**

**ಭಾವಾರ್ಥ:-** ಎಲ್ಲ ಜೀವರ ಎಲ್ಲ ಅವಸ್ಥೆಗಳನ್ನು ಪ್ರೇರಿಸುವವನು ಒಬ್ಬನೇ. ಅವನು ರಾಜನಂತೆ ದೇಶ ಅಥವಾ ಕಾಲದಲ್ಲಿ ಪ್ರವರ್ತಕನಲ್ಲ. ಎಲ್ಲ ಅವಸ್ಥೆಗಳನ್ನೂ ಪ್ರೇರಿಸುವವನು. ಅವನು ಪರಮೇಶ್ವರನಾದ್ದರಿಂದಲೇ ಸರ್ವಾವಸ್ಥಾಪ್ರೇರಕನಾಗಿರುವನು.

## ಮುಗ್ಧಪ್ರಾಪ್ತ್ಯಧಿಕರಣ

**॥ ಓಂ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ಓಂ ॥ 3-2-10 ॥**

ಮೂರ್ಛಾವಸ್ಥೆಯಲ್ಲಿ ಜೀವನು ಹೃದಯದಲ್ಲಿರುವ ಪ್ರಾಜ್ಞನಾಮಕ ಭಗವಂತನಲ್ಲಿ ಅರ್ಧಪ್ರವೇಶಿಸಿರುತ್ತಾನೆ. ಜೀವರಿಗೆ ಮೋಹಾವಸ್ಥೆಯಲ್ಲಿ ಪರಮಾತ್ಮನಿಂದ ದೂರದಲ್ಲಿರುವಿಕೆ, ಸಮೀಪದಲ್ಲಿರುವಿಕೆ, ಹರಿಯಲ್ಲಿ ಸಮಗ್ರವಾಗಿ ಅಥವಾ ಅರ್ಧಪ್ರವೇಶವನ್ನು ಹೇಳಬೇಕು. ಆದರೆ ಇದರಲ್ಲಿ ಮೊದಲನೆಯ ಮೂರು ಜಾಗ್ರದಾದಿ ಅವಸ್ಥೆಯು ಧರ್ಮವಾಗಿದೆ. ಆದ್ದರಿಂದ ಪರಿಶಿಷ್ಟವಾದ ಅರ್ಧಪ್ರವೇಶವು ಮೋಹಾವಸ್ಥೆಯಲ್ಲಿ ಜೀವನಿಗೆ ಸಿದ್ಧಿಸುತ್ತದೆ. 'ಸರ್ವಾವಸ್ಥಾ ಪ್ರೇರಕಶ್ಚ' ಎಂಬುದರಿಂದಲೇ ಇದನ್ನು ಸಂಗ್ರಹಿಸಿದ್ದಾರೆ. ಮೋಹಾವಸ್ಥೆಯ ಪ್ರೇರಕನೂ ಭಗವಂತನೇ ಆಗಿದ್ದಾನೆ.

## ನ ಸ್ಥಾನತೋಽಪ್ಯಧಿಕರಣ

### ॥ ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ ॥ 3-2-11 ॥

ಸರ್ವಸ್ಥಾನದಲ್ಲಿರುವ ಭಗವಂತನು ದೋಷರಹಿತನೂ, ಜ್ಞಾನಾನಂದಾದಿ ಗುಣಪೂರ್ಣನೂ, ಭೇದರಹಿತನೂ ಆಗಿದ್ದಾನೆ. ಹೀಗೆಂದು 'ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬ ಶ್ರುತಿಯು ನುಡಿಯುತ್ತಿದೆ. ಆದ್ದರಿಂದ ದೇವತೆಗಳು, ಮನುಷ್ಯರು, ತಿರ್ಯಕ್‌ಪ್ರಾಣಿಗಳು, ನೇತ್ರ ಮುಂತಾದ ಸ್ಥಾನಗಳು ಹೀಗೆ ಆಶ್ರಯಗಳಲ್ಲಿ ಭೇದವಿದ್ದರೂ ಅಲ್ಲಿರುವ ಭಗವಂತನ ರೂಪಗಳಲ್ಲಿ ಭೇದವಿಲ್ಲ.

**ಅಣುಭಾಷ್ಯ:- 'ಸರ್ವರೂಪೇಷ್ವಭೇದವಾನ್'**

**ಭಾವಾರ್ಥ:-** ಶರೀರ, ಅಕ್ಷಿ ಇವೇ ಮುಂತಾದ ಸ್ಥಾನಗಳಲ್ಲಿ ಭೇದವಿದ್ದರೂ ಜಾಗ್ರದಾದಿ ಅವಸ್ಥಾಪ್ರೇರಕವಾದ ವಿಶ್ವ-ತೈಜಸಾದಿರೂಪಗಳಲ್ಲಿ ಭೇದವಿಲ್ಲ. ಕೇವಲ ವಾಸುದೇವಾದಿ ನಾಲ್ಕುರೂಪಗಳು ಮಾತ್ರ ಮೂಲರೂಪದಿಂದ ಅಭಿನ್ನವಲ್ಲ. ಮತ್ಸ್ಯ-ಕೂರ್ಮಾದಿ ಅನಂತರೂಪಗಳೂ ಅಭಿನ್ನವಾಗಿವೆ ಎಂದು ತಿಳಿಸಲು 'ಸರ್ವರೂಪೇಷು' ಎಂದಿದ್ದಾರೆ. ಇಲ್ಲದಿದ್ದರೆ 'ತೇಷು ರೂಪೇಷು' ಎನ್ನಬಹುದಿತ್ತು. ಪರಮಾತ್ಮನ ಎಲ್ಲ ರೂಪಗಳೂ ಜ್ಞಾನಾನಂದಮಯವಾಗಿವೆ. ಅವನ ರೂಪಗಳಲ್ಲಿರುವ ಗುಣಕ್ರಿಯಾದಿಗಳಲ್ಲೂ ಭೇದವಿಲ್ಲ.

**ಅಣುಭಾಷ್ಯ:- 'ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ'**

**ಭಾವಾರ್ಥ:-** ದೇಶಾಂತರ-ಕಾಲಾಂತರಗಳಲ್ಲಿ ಜಾಗ್ರದಾದಿ ಅವಸ್ಥೆಗಳ ಪ್ರೇರಕನು ಬೇರೊಬ್ಬನಿರಬಹುದು ಎಂಬ ಆಶಂಕೆಯನ್ನು ಇಲ್ಲಿ ಪರಿಹರಿಸಿದ್ದಾರೆ. ಒಳಭಾಗದಲ್ಲಿ, ಹೊರಭಾಗದಲ್ಲಿ, ಸಮೀಪದಲ್ಲಿ, ದೂರದಲ್ಲಿ ಹೀಗೆ ಎಲ್ಲ ದೇಶದಲ್ಲೂ; ಆಗ, ಈಗ, ಹಿಂದಿನಕಾಲ, ಮುಂದಿನಕಾಲ ಮುಂತಾದ ಎಲ್ಲ ಕಾಲದಲ್ಲೂ ವಿಷ್ಣುವೇ ಸರ್ವೇಶ್ವರನು.

## ಅರೂಪಾಧಿಕರಣ

**|| ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ || 3-2-14 ||**

ವಿಷ್ಣುವು ಪ್ರಕೃತ್ಯಾದಿಗಳಿಂದ ಉತ್ತಮನಾದ್ದರಿಂದ ಪ್ರಾಕೃತರೂಪವುಳ್ಳವನಲ್ಲ. ಜ್ಞಾನಾನಂದಸ್ವರೂಪನಾಗಿದ್ದಾನೆ. ಈ ವಿಷಯದಲ್ಲಿ 'ಅಸ್ಥೂಲಮನಣು.....' ಎಂಬ ಶ್ರುತಿಯು ಪ್ರಮಾಣವಾಗಿದೆ.

**ಅಣುಭಾಷ್ಯ:- 'ಪರಮೇಶ್ವರಃ'**

**ಭಾವಾರ್ಥ:-** ಸೂತ್ರದಲ್ಲಿರುವ 'ತತ್ಪ್ರಧಾನತ್ವಾತ್' ಎಂಬುದರ ವಿವರಣೆ ಅಣುಭಾಷ್ಯದಲ್ಲಿ 'ಪರಮೇಶ್ವರಃ' ಎಂಬುದಾಗಿದೆ. 'ಪರಮಾ' = ಸರ್ವೋತ್ತಮವಾದ ಪ್ರಕೃತಿ, ಅದಕ್ಕೆ 'ಈಶ್ವರಃ'=ಒಡೆಯ. ಪ್ರಕೃತ್ಯಾದಿಗಳಿಗೂ ಪ್ರೇರಕನಾದ್ದರಿಂದ ಅದಕ್ಕಿಂತ ಉತ್ತಮ ಎಂದು ಅಭಿಪ್ರಾಯ.

## ಉಪಮಾಧಿಕರಣ

**|| ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ || 3-2-18 ||**

ಮತ್ಸ್ಯಾದಿರೂಪಗಳೂ ಅಂಶಗಳಾಗಿವೆ. ಜೀವನೂ ಅಂಶನಾಗಿದ್ದಾನೆ. ಆದ್ದರಿಂದ ಜೀವನು ಮತ್ಸ್ಯಾದಿರೂಪಗಳಿಂದ ಸಾಮ್ಯವನ್ನು ಪಡೆದಿದ್ದಾನೆ ಎನ್ನುವುದು ಸರಿಯಲ್ಲ. ಪ್ರತಿಬಿಂಬವಾದ ಸೂರ್ಯಕ, ನೆರಳು ಮುಂತಾದವು ಪ್ರತಿಬಿಂಬವಾದ್ದರಿಂದ ಸೂರ್ಯನಿಂದ ಅಭಿನ್ನವಲ್ಲ. 'ರೂಪಂ ರೂಪಂ ಪ್ರತಿರೂಪೋ ಬಭೂವ' ಎಂಬ ಶ್ರುತಿಯು ಈಶ್ವರ-ಜೀವರಿಗೆ ಬಿಂಬ-ಪ್ರತಿಬಿಂಬ

ಭಾವವನ್ನು ಹೇಳಿದೆ. ಆದ್ದರಿಂದ ಜೀವನು ಮತ್ಸ್ಯಾದಿರೂಪಗಳಿಂದ ಅಭಿನ್ನನಾಗುವುದಿಲ್ಲ.

**ಅಣುಭಾಷ್ಯ:- 'ಅನ್ಯಶ್ಚ ಜೀವತಃ'**

**ಭಾವಾರ್ಥ:-** ಸಮನ್ವಯಾಧ್ಯಾಯದ 'ಅನ್ಯಶ್ಚ ಜೀವತಃ' ಎಂಬುದರಿಂದ ಈ ಅಧಿಕರಣದ ಸಾರವನ್ನು ಸಂಗ್ರಹಿಸಿದ್ದಾರೆ.

## ಅಂಬುವದಧಿಕರಣ

### || ಓಂ ಅಂಬುವದಗ್ರಹಣಾತ್ತು ನ ತಥಾತ್ವಮ್ ಓಂ || 3-2-19 ||

ಮೋಕ್ಷವು ಭಕ್ತಿಯ ಫಲವಾಗಿದೆ. ಜ್ಞಾನಾನಂದಾದಿಗಳು ಜೀವಸ್ವರೂಪವೇ ಆಗಿ ನಿತ್ಯಸಿದ್ಧವಾಗಿದ್ದರೂ ಅವುಗಳ ಅಭಿವ್ಯಕ್ತಿಯು ಭಕ್ತಿಸಾಧ್ಯ. ಇಲ್ಲದಿದ್ದರೆ ಅಭಿವ್ಯಕ್ತವಾಗುವುದಿಲ್ಲ. 'ಯಮೇವೈಷ ವೃಣುತೇ ತೇನ ಲಭ್ಯಃ' ಎಂಬ ಶ್ರುತಿಯಿಂದ ಇದು ಸಿದ್ಧವಾಗುತ್ತದೆ.

## ವೃದ್ಧಿಹ್ರಾಸಾಧಿಕರಣ

### || ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಮ್ ಓಂ || 3-2-20 ||

ಬ್ರಹ್ಮಾದಿದೇವತೆಗಳಷ್ಟೇ ಫಲವು ಮನುಷ್ಯರಿಗಿಲ್ಲ. ಇವರೆಲ್ಲರ ಫಲದಲ್ಲಿ ತಾರತಮ್ಯವಿದೆ. 'ಸೈಷಾ ಆನಂದಸ್ಯ ಮೀಮಾಂಸಾ ಭವತಿ' ಎಂಬ ಶ್ರುತಿಯು ತಾರತಮ್ಯವನ್ನು ಹೇಳುತ್ತಿದೆ. ಹೀಗೆ ಫಲದಲ್ಲಿ ತಾರತಮ್ಯವು ಇರುವುದರಿಂದ ಭಕ್ತಿಯಲ್ಲೂ ತಾರತಮ್ಯವಿದೆ. ಹೀಗೆ ಒಪ್ಪದಿದ್ದಲ್ಲಿ ಫಲದಾತೃವಾದ ಈಶ್ವರನಿಗೆ ವೈಷಮ್ಯಾದಿದೋಷಗಳು ಸಂಭವಿಸುತ್ತದೆ.

**ಅಣುಭಾಷ್ಯ:- 'ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್'**

**ಭಾವಾರ್ಥ:-** ಮೋಕ್ಷದಲ್ಲೂ ಸ್ವರೂಪಾಭಿವ್ಯಕ್ತಿರೂಪವಾದ ಫಲದಲ್ಲಿ ತಾರತಮ್ಯವಿರುವುದು. 'ಸೈಷಾ ಆನಂದಸ್ಯ ಮೀಮಾಂಸಾ' ಎಂಬ ಶ್ರುತಿಯಿಂದ

ಸಿದ್ಧವಾಗಿದೆ. ಸಾಧನವಾದ ಭಕ್ತಿಯಲ್ಲಿ ತಾರತಮ್ಯವಿರದೆ ಸಾಧ್ಯವಾದ ಆನಂದದಲ್ಲಿ ತಾರತಮ್ಯವಿರಲು ಸಾಧ್ಯವಿಲ್ಲ. ಆದ್ದರಿಂದ ಭಕ್ತಿತಾರತಮ್ಯವನ್ನು ಒಪ್ಪಬೇಕು.

# ಪ್ರಕೃತೈತಾವತ್ವಾಧಿಕರಣ

**॥ ಪ್ರಕೃತೈ ತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ ॥ 3-2-22 ॥**

ಈಶ್ವರನು ಸೃಷ್ಟಿಮಾಡಿ, ಎಲ್ಲಿಯ ತನಕ ಸಂಹಾರದಲ್ಲಿ ಪ್ರವೃತ್ತಿಯನ್ನು ಮಾಡುವುದಿಲ್ಲವೋ ಅಷ್ಟರ ತನಕ ಸ್ವತಃಪಾಲನೆಯು ಸಂಭವಿಸುತ್ತದೆ. ಆದ್ದರಿಂದ ಈಶ್ವರನು ಪಾಲಕನಲ್ಲ ಎಂದು ಆಶಂಕಿಸಬಾರದು. ಚೇತನರ ಪೋಷಣೆಗೆ ಅವಶ್ಯವಾದ ಅನ್ನಪಾನಾದಿಗಳಿಗಾಗಿ ಈಶ್ವರವ್ಯಾಪಾರದ ಅವಶ್ಯಕತೆ ಇದೆ. 'ನೈತಾವದೇನಾ ಪರೋ ಅನ್ಯದಸ್ತು ್ಯಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ' ಎಂಬ ಶ್ರುತಿಯು ವಿಷ್ಣುವು ಕೇವಲ ಸೃಷ್ಟಿ-ಸಂಹಾರಕನಷ್ಟೇ ಆಗಿರದೆ ಈ ಜಗತ್ತಿನ ಪೋಷಕನೂ ಆಗಿದ್ದಾನೆ ಎನ್ನುತ್ತಿದೆ.

ಈ ಅಭಿಪ್ರಾಯವನ್ನೂ ಸಹ ಸಮನ್ವಯಾಧ್ಯಾಯದಲ್ಲಿ ಅಣುಭಾಷ್ಯದಲ್ಲಿ 'ಸರ್ವಕರ್ತಾ' ಎಂಬುದರಿಂದ ಸಂಗ್ರಹಿಸಿದ್ದಾರೆ.

# ಅವ್ಯಕ್ತತ್ವಾಧಿಕರಣ

**॥ ಓಂ ತದವ್ಯಕ್ತಮಾಹ ಹಿ ಓಂ ॥ 3-2-23 ॥**

'ಅರೂಪಮಕ್ಷರಂ ಬ್ರಹ್ಮ ಸದಾ ವ್ಯಕ್ತಂ ಚ ನಿಷ್ಕಲಮ್' ಎಂಬ ಶ್ರುತಿಯು ಬ್ರಹ್ಮನನ್ನು ಅವ್ಯಕ್ತನೆಂದು ಹೇಳುವುದರಿಂದ ಬ್ರಹ್ಮನು ಅವ್ಯಕ್ತನು. ಅವ್ಯಕ್ತನಾದ್ದರಿಂದ ವ್ಯಕ್ತನೆನಿಸಬೇಕಿದ್ದರೆ ಅವನಲ್ಲಿ ಭಕ್ತಿಯು ಆವಶ್ಯಕವಾದ್ದರಿಂದ ಅದು ವ್ಯರ್ಥ ಎನ್ನುವಂತಿಲ್ಲ. ಭಕ್ತಿಪೂರ್ವಕವಾಗಿ ಶ್ರವಣ-ಮನನಾದಿಗಳಿಂದ ಅವನ ಪ್ರಸಾದವಾಗುತ್ತದೆ. ಆಗ ಅವನ ಅಪರೋಕ್ಷಜ್ಞಾನವಾಗುತ್ತದೆ. ಪರಮಾತ್ಮನು ಅವ್ಯಕ್ತನಾದರೂ ಅವನ ಅಚಿಂತ್ಯಾದ್ಭುತಶಕ್ತಿಯಿಂದ ವ್ಯಕ್ತನೂ ಆಗುವನು.

**ಅಣುಭಾಷ್ಯ:- 'ಪರಮೇಶ್ವರಃ'**

ಭಾವಾರ್ಥ:- ಆದ್ದರಿಂದಲೇ ಅಣುಭಾಷ್ಯದಲ್ಲಿ 'ಪರಮೆಶ್ವರಃ' ಎಂದರು. ಅಂದರೆ ಅಚಿಂತ್ಯವಾದ ಐಶ್ವರ್ಯವು ಅವನಲ್ಲಿದೆ ಎಂದು. ಆದ್ದರಿಂದ ಸಾಧಕನ ಭಕ್ತಿಗೆ ಮೆಚ್ಚಿ ಪ್ರಸನ್ನನಾಗಿ ತನ್ನ ಅಪರೋಕ್ಷಜ್ಞಾನವನ್ನು ನೀಡುವನು.

## ಅಹಿಕುಂಡಲಾಧಿಕರಣ

### ॥ ಓಂ ಉಭಯವ್ಯಪದೇಶಾತ್ ತ್ವಹಿಕುಂಡಲವತ್ ಓಂ ॥ 3-2-28 ॥

ಬ್ರಹ್ಮನು ಗುಣ ಮತ್ತು ಗುಣಿ ಎರಡೂ ಆಗಲು ಸಾಧ್ಯವಿಲ್ಲ. ಶ್ರುತಿ ಹೇಗೆ ಎರಡನ್ನೂ ಪರಮಾತ್ಮನಿಗೆ ಹೇಳಿದೆ? ಎಂಬ ಆಕ್ಷೇಪವನ್ನು ಇಲ್ಲಿ ಪರಿಹರಿಸಿದ್ದಾರೆ. ಸರ್ಪ ಮತ್ತು ಅದರ ಕುಂಡಲ ಎರಡೂ ಬೇರೆಯಲ್ಲ. ಆದರೂ ಸರ್ಪಕ್ಕೆ ಕುಂಡಲ-ಕುಂಡಲಿಭಾವ ಹೇಗಿದೆಯೋ ಅದರಂತೆಯೇ 'ಆನಂದಂ ಬ್ರಹ್ಮಣೋ ವಿದ್ವಾನ್', 'ಆನಂದೋ ಬ್ರಹ್ಮ' ಶ್ರುತಿಯು ಆನಂದವುಳ್ಳವನೂ ಹಾಗು ಆನಂದಸ್ವರೂಪನೂ ಎರಡೂ ಆಗಿದ್ದಾನೆ ಪರಮಾತ್ಮ ಎಂದು ಹೇಳಿರುವುದು ಸಮಂಜಸವೇ ಆಗಿದೆ. ಭಕ್ತಿಯು ಹೀಗೆ ಅವನಲ್ಲಿ ಉಪಪನ್ನವೇ ಆಗಿದೆ.

**ಅಣುಭಾಷ್ಯ:- 'ಸ ಏಕಃ ಪರಮೇಶ್ವರಃ'**

**ಭಾವಾರ್ಥ:-** ಪರಮಾತ್ಮನಿಗೂ ಅವನ ಗುಣಗಳಿಗೂ ಭೇದವಿಲ್ಲ. ಅವನು ಗುಣಪೂರ್ಣನೂ ಹಾಗು ಗುಣಸ್ವರೂಪನೂ ಆಗಿದ್ದಾನೆ. ಭೇದವಿಲ್ಲದಿದ್ದರೂ ಭೇದಕಾರ್ಯನಿರ್ವಾಹಕವಾದ ವಿಶೇಷದ ಬಲದಿಂದ ಗುಣವುಳ್ಳವನು ಹಾಗು ಗುಣಸ್ವರೂಪನು ಎಂಬ ವ್ಯವಹಾರವು ಎರಡೂ ಯುಕ್ತವಾಗುವುದು.

## ಪರಮತಾಧಿಕರಣ

### ॥ ಓಂ ಪರಮತಃ ಸೇತೂನ್ಮಾನ ಸಂಬಂಧಭೇದವ್ಯಪದೇಶೇಭ್ಯಃ ಓಂ ॥ 3-2-32 ॥

ಪರಮಾತ್ಮನ ಆನಂದಾದಿಗಳು ಲೋಕಾನಂದಾದಿಗಳಿಗಿಂತ ವಿಲಕ್ಷಣವಾಗಿದೆ.

ಏಕೆಂದರೆ ಶ್ರುತಿಯಲ್ಲಿ ಬ್ರಹ್ಮನ ಆನಂದಕ್ಕೆ ಸೇತುತ್ವವು ಹೇಳಲ್ಪಟ್ಟಿದೆ. ಅಂದರೆ ಬ್ರಹ್ಮನ ಆನಂದವು ಜಗತ್ತನ್ನೇ ಧಾರಣ ಮಾಡಿದೆ. ಲೋಕಾನಂದಕ್ಕೆ ಈ ಶಕ್ತಿಯಿಲ್ಲ. ಲೋಕಾನಂದವು ಪರಿಮಿತ. ಆದರೆ ಬ್ರಹ್ಮನ ಆನಂದವು ಉನ್ಮಾನ = ಅಪರಿಮಿತ.

ಬ್ರಹ್ಮ-ಜೀವರ ಆನಂದವು ಬಿಂಬ-ಪ್ರತಿಬಿಂಬರೂಪವಾಗಿದೆ ಎಂದು ಶ್ರುತಿಯು ಹೇಳಿದೆ. 'ಅನ್ಯತ್ ಜ್ಞಾನಂ ತು ಜೀವಾನಾಮನ್ಯತ್ ಜ್ಞಾನಂ ಪರಸ್ಯ ಚ' ಎಂದು ಭೇದವೂ ಶ್ರುತವಾಗಿದೆ.

**ಅಣುಭಾಷ್ಯ:- 'ಪರಮೇಶ್ವರಃ'**

ಭಾವಾರ್ಥ:- ಪರಮ್ಯೈಃ = ಲೋಕವಿಲಕ್ಷಣವಾದ ಸೇತುತ್ವಾದಿಗುಣಗಳಿಂದ, ಈಶ್ವರಃ = ಈಶ್ವರನಾಗಿದ್ದಾನೆ. ಲೌಕಿಕಾನಂದವಿಲಕ್ಷಣ ಆನಂದಾದಿಗುಣಗಳಿಂದ ಯುಕ್ತನಾಗಿದ್ದಾನೆ ಎಂದು ಅಭಿಪ್ರಾಯ.

## ಸ್ಥಾನವಿಶೇಷಾಧಿಕರಣ

### ॥ ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ ॥ 3-2-35 ॥

ಬ್ರಹ್ಮನ ಆನಂದಾದಿಗಳಲ್ಲಿ ಇಲ್ಲದ ವೈಚಿತ್ರ್ಯವು ಜೀವರ ಆನಂದಾದಿಗಳಲ್ಲಿ ತೋರುತ್ತಿದೆ. ಆದ್ದರಿಂದ ಜೀವನ ಆನಂದಾದಿಗಳು ಬ್ರಹ್ಮನ ಆನಂದಾದಿಗಳ ಪ್ರತಿಬಿಂಬವಲ್ಲ ಎಂದು ಆಶಂಕಿಸಬಾರದು.

ಸೂರ್ಯಾದಿ ಬಿಂಬದಲ್ಲಿ ವೈಚಿತ್ರ್ಯವಿಲ್ಲದಿದ್ದರೂ ಸೂರ್ಯಕಾಂತಾದಿಗಳಲ್ಲಿ ಸ್ಥಾನಗುಣದಿಂದ ಅಗ್ನಿಜನಕತ್ವಾದಿ ಗುಣವಿಶೇಷದಿಂದಾಗಿ ಪ್ರತಿಬಿಂಬ ವೈಚಿತ್ರ್ಯವು ಸಂಭವಿಸುತ್ತದೆ.

**ಅಣುಭಾಷ್ಯ:- 'ಸ ಏಕಃ ಪರಮೇಶ್ವರಃ'**

**ಭಾವಾರ್ಥ:-** ವಿಷ್ಣುವು ಜ್ಞಾನಾನಂದಾದಿಗುಣಗಳಿಂದ ಏಕಪ್ರಕಾರನಾಗಿದ್ದಾನೆ. ಬಿಂಬದ ಆನಂದದಲ್ಲಿ ವೈಚಿತ್ರ್ಯವಿಲ್ಲದಿದ್ದರೂ ಪ್ರತಿಬಿಂಬದ ಆನಂದಾದಿಗಳಲ್ಲಿ ವೈಚಿತ್ರ್ಯವು ಬಿಂಬನಾದ ಭಗವಂತನ ಐಶ್ವರ್ಯದಿಂದ ಅಂದರೆ ಸಾಮರ್ಥ್ಯವಿಶೇಷದಿಂದ ಸಂಭವಿಸುವುದು.

ಅಥವಾ:- 'ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್'

**ಭಾವಾರ್ಥ:-** ಭಗವಂತನ ಆನಂದಾದಿಗಳಲ್ಲಿ ವಿಶೇಷವಿಲ್ಲದಿದ್ದರೂ ಬ್ರಹ್ಮಾದಿ ಸ್ಥಾನದಲ್ಲಿ ಭಕ್ತ್ಯಾದಿವಿಶೇಷವಿರುವುದರಿಂದ ಆನಂದಾದಿಗಳಲ್ಲಿ ವಿಶೇಷವು ಯುಕ್ತವೇ ಆಗಿದೆ.

## ತಥಾನ್ಯತ್ವಾಧಿಕರಣ

### ॥ ಓಂ ತಥಾನ್ಯತ್ ಪ್ರತಿಷೇಧಾತ್ ಓಂ ॥ 3-2-37 ॥

ಬ್ರಹ್ಮಾನಂದಾದಿಗಳು ಜೀವಾನಂದಾದಿಗಳಿಗಿಂತ ಭಿನ್ನವಾಗಿರುವಂತೆ ಧ್ಯಾನಾವಸ್ಥೆಯಲ್ಲಿ ತೋರುವ ಪ್ರತೀಕಕ್ಕಿಂತ ಭಗವಂತನು ಭಿನ್ನನಾಗಿದ್ದಾನೆ. 'ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ' ಎಂದು ಶ್ರುತಿಯು ಈ ವಿಷಯದಲ್ಲಿ ಆಧಾರ.

**ಅಣುಭಾಷ್ಯ:- 'ತದೇಕಃ ಪರಮೇಶ್ವರಃ'**

**ಭಾವಾರ್ಥ:-** ಬ್ರಹ್ಮನು ಒಬ್ಬನೇ. ಪರಮೇಶ್ವರನೂ ಆಗಿರುವನು. ಆದರೆ ಧ್ಯಾನಾವಸ್ಥೆಯಲ್ಲಿ ತೋರುವ ಪ್ರತೀಕಗಳಾದರೋ ಧ್ಯಾತೃಗಳು ಅನೇಕ ರಾಗಿರುವುದರಿಂದ ಅನೇಕ. ಹಾಗೂ ಧ್ಯಾತೃಗಳ ಒಟ್ಟು ದೋಷದಿಂದ ಅನೇಕ ದುರ್ಲಕ್ಷಣವುಳ್ಳದ್ದಾಗಿ ಪರಮೇಶ್ವರನಂತೆ ತೋರುತ್ತದೆ. ಅದೇ ಬ್ರಹ್ಮವಲ್ಲ ಎಂದು ಅಭಿಪ್ರಾಯ.

## ಸರ್ವಗತತ್ವಾಧಿಕರಣ

### ॥ ಓಂ ಅನೇನ ಸರ್ವಗತತ್ವಮಾಯಾಮಯಶಬ್ದಾದಿಭ್ಯಃ ಓಂ ॥ 3-2-38 ॥

'ಏಷ ಸರ್ವ ಏಷ ಸರ್ವಗತಃ' ಎಂದು ವಿಷ್ಣುವಿಗೆ ಸರ್ವಗತತ್ವವನ್ನು ಹೇಳುವ ಶ್ರುತಿಯು ಇರುವುದರಿಂದ 'ಸರ್ವತ್ರ ಸರ್ವಮೇತಸ್ಮಾತ್ ಸರ್ವದಾ ಸರ್ವವಸ್ತುಷು ಸ್ವರೂಪಭೂತಯಾ, ನಿತ್ಯಶಕ್ತ್ಯಾ, ಮಾಯಾಖ್ಯಯಾ.....' ಎಂದು ವಿಷ್ಣುವನ್ನು ಮಾಯಾಮಯ ಎನ್ನುವ ಶ್ರುತಿ ಇರುವುದರಿಂದ ಜಗತ್ತಿನ

ಉದಯಾದಿಗಳೆಲ್ಲವೂ ಎಲ್ಲ ಕಾಲ-ದೇಶಗಳಲ್ಲೂ ಪರಮಾತ್ಮನಿಂದಲೇ ಸಂಭವಿಸುವುದು.

**ಅಣುಭಾಷ್ಯ:- 'ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ'**

**ಭಾವಾರ್ಥ:-** ಸರ್ವದೇಶಕಾಲಗಳಲ್ಲಿಯೂ ಪರಮೇಶ್ವರನೊಬ್ಬನೇ ಸೃಷ್ಟ್ಯಾದಿಕರ್ತ. ಈ ಅಣುಭಾಷ್ಯದ ವಾಕ್ಯದಿಂದ ಈ ಅಧಿಕರಣದ ಸಾರವನ್ನು ಸಂಗ್ರಹಿಸಿದ್ದಾರೆ.

## ಫಲಾಧಿಕರಣ

### ॥ ಓಂ ಫಲಮತ ಉಪಪತ್ತೇಃ ಓಂ ॥ 3-2-39 ॥

'ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಮ್', 'ಪುಣ್ಯೇನ ಪುಣ್ಯಂ ಲೋಕಂ ನಯತಿ' ಮುಂತಾದ ಶ್ರುತಿಗಳಿರುವುದರಿಂದ ಈಶ್ವರನೇ ಫಲದಾತಾ ಹೊರತು ಕರ್ಮವಲ್ಲ. ಕರ್ಮವು ಅಚೇತನ, ಆದ್ದರಿಂದ ಅದು ಫಲದಾತೃವಾಗಲು ಸಾಧ್ಯವಿಲ್ಲ.

**ಅಣುಭಾಷ್ಯ:- 'ಸ ಏಕಃ ಪರಮೇಶ್ವರಃ'**

**ಭಾವಾರ್ಥ:-** ವಿಷ್ಣುವೊಬ್ಬನೇ ಫಲದಾನಾದಿಗಳಲ್ಲಿ ಪರಮೇಶ್ವರಃ = ಸಮರ್ಥನು. ಅಚೇತನವಾದುದರಿಂದ ಕರ್ಮವು ಸಮರ್ಥವಲ್ಲ ಎಂದು ಅಭಿಪ್ರಾಯ.

## ತೃತೀಯಪಾದ

ಪ್ರಥಮ ಸೂತ್ರದಲ್ಲಿನ ಜಿಜ್ಞಾಸಾಶಬ್ದದ ಅರ್ಥವಾದ ಉಪಾಸನಾವನ್ನು ಈ ಅಧ್ಯಾಯದಲ್ಲಿ ನಿರೂಪಿಸಿದ್ದಾರೆ. ವಿಷ್ಣುವಿನ ಉಪಾಸನಾ ಎಂದರೆ ಶ್ರವಣ, ಮನನ, ನಿಧಿಧ್ಯಾಸನ. ಜಿಜ್ಞಾಸಾ ಮತ್ತು ಉಪಾಸನಾ ಎರಡೂ ಬೇರೆಯಲ್ಲ ಎಂದು ಅನುವ್ಯಾಖ್ಯಾನದಲ್ಲಿ ಆಚಾರ್ಯರು- 'ಸೋಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸಸ್ವರೂಪಿಣೀ । ಧ್ಯಾನರೂಪಾ ಪರಾ ಚೈವ...'. ಶ್ರೀಜಯತೀರ್ಥರೂ 'ಉಪಾಸನಾನಾಮ ಬ್ರಹ್ಮ ಜಿಜ್ಞಾಸಾ' ಎಂದಿದ್ದಾರೆ.

ಉಪಾಸನೆಗೆ ಮಂದ, ಮಧ್ಯಮ ಮತ್ತು ಉತ್ತಮ ಎಂದು ಮೂರುವಿಧ ಅಧಿಕಾರಿಗಳು. ಈ ಅಧಿಕಾರಿಕ್ರಮಾನುಗುಣವಾಗಿ ಸೋಪಾನಾರೋಹಣನ್ಯಾಯದಿಂದ ಅಧಿಕರಣಗಳ ಸಾರವನ್ನು 'ಸಚ್ಚಿದಾನಂದ ಆತ್ಮೇತಿ' ಎಂದು ಅಣುಭಾಷ್ಯದಲ್ಲಿ ಸಂಗ್ರಹಿಸಿದ್ದಾರೆ. ಇಲ್ಲಿ ಉಪಾಸನಾ ಎಂದರೆ ಕೇವಲ ಧ್ಯಾನ. ಶ್ರವಣ, ಮನನಗಳಲ್ಲ.

**ಅಣುಭಾಷ್ಯ:- 'ಸಚ್ಚಿದಾನಂದ ಆತ್ಮೇತಿ ಮಾನುಷ್ಯೈಸ್ತು ಸುರೇಶ್ವರೈಃ ।**
**ಯಥಾಕ್ರಮಂ ಬಹುಗುಣೈಃ ಬ್ರಹ್ಮಣಾ ತ್ವಖಿಲೈರ್ಗುಣೈಃ ॥**
**ಉಪಾಸ್ಯಃ........' ॥**

**ಭಾವಾರ್ಥ:-** ವಿಷ್ಣುವು ದೋಷರಹಿತನೂ ಜ್ಞಾನಸ್ವರೂಪನೂ, ಆನಂದ ರೂಪನೂ ಹಾಗು ಸ್ವಾಮಿಯು ಎಂದು ಈ ನಾಲ್ಕು ಗುಣಗಳ ಉಪಾಸನೆಯನ್ನು ಮನುಷ್ಯರು ಮತ್ತು ಬ್ರಹ್ಮಾದಿದೇವತೆಗಳು ಎಲ್ಲರೂ ಮಾಡಬೇಕು. ದೇವತೆಗಳು ಅವರವರ ಯೋಗ್ಯತೆಗನುಗುಣವಾಗಿ ಹೆಚ್ಚಿನ ಗುಣಗಳ ಉಪಾಸನೆಯನ್ನು ಮಾಡಬೇಕು. ಬ್ರಹ್ಮದೇವರು ಸಕಲಗುಣಗಳ ಉಪಾಸನೆಯನ್ನು ಮಾಡಬೇಕು.

## ಸರ್ವವೇದಾಧಿಕರಣ

### ॥ ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ ॥ 3-3-1 ॥

'ಆತ್ಮೇತ್ಯೇವೋಪಾಸೀತ', 'ಶ್ರೋತವ್ಯೋ ಮಂತವ್ಯಃ' ಮುಂತಾದ ವಿಧಿಗಳೆಲ್ಲವೂ ಸರ್ವಸಾಧಾರಣವಾಗಿದೆ. ಆದ್ದರಿಂದ ಸಮಸ್ತವೇದಗಳ ಅಧ್ಯಯನವನ್ನು ಮಾಡಿ ಬ್ರಹ್ಮನನ್ನು ತಿಳಿಯಬೇಕು.

**ಅಣುಭಾಷ್ಯ:- 'ಸರ್ವವೇದೈಶ್ಚ ಸರ್ವೈರಪಿ ಯಥಾಬಲಂ ಜ್ಞೇಯೋ ವಿಷ್ಣುಃ'**

**ಭಾವಾರ್ಥ:-** ಎಲ್ಲ ಅಧಿಕಾರಿಗಳೂ ತಮ್ಮತಮ್ಮ ಶಕ್ತಿಗನುಗುಣವಾಗಿ ಎಲ್ಲ

ವೇದಗಳ ಶ್ರವಣ-ಮನನಗಳಿಂದ ಬ್ರಹ್ಮಜ್ಞಾನವನ್ನು ಪಡೆಯಬೇಕು. ಕೇವಲ ತಮ್ಮತಮ್ಮ ಶಾಖೆಗಳ ಅಧ್ಯಯನ ಅಪರ್ಯಾಪ್ತ.

**ವಿಶೇಷವಿಚಾರ:-** ಸೂತ್ರಕಾರರು ಸರ್ವವೇದಾಂತಪ್ರತ್ಯಯಂ ಎಂಬ ಈ ಪಾದದ ಪ್ರಥಮಾಧಿಕರಣದಲ್ಲಿ ಸರ್ವವೇದಾರ್ಥಪರಿಜ್ಞಾನವು ಅಗತ್ಯವೆಂದು ಪ್ರತಿಪಾದಿಸಿದ್ದಾರೆ. ಅದಕ್ಕನುಗುಣವಾಗಿ ಭಾಷ್ಯಕಾರರೂ ಈ ಅಧಿಕರಣದ ತಾತ್ಪರ್ಯವನ್ನು 'ಸರ್ವವೇದೈಶ್ಚ ಯಥಾಕ್ರಮಂ ಜ್ಞೇಯಃ' ಎಂದು ಮೊದಲು ಹೇಳಬೇಕಿತ್ತು. ಆದರೂ ಸರ್ವವೇದಾರ್ಥಪರಿಜ್ಞಾನವು ಉಪಾಸನೆಗಾಗಿ. ಆದಕಾರಣ ಉಪಾಸನೆಗೆ ಪ್ರಾಧಾನ್ಯವನ್ನು ತಿಳಿಸಲು 'ಸಚ್ಚಿದಾನಂದ ಆತ್ಮೇತಿ' ಎಂದು ಮೊದಲು ತಿಳಿಸಿ ಕ್ರಮೋಲ್ಲಂಘನೆ ಮಾಡಿದ್ದಾರೆ. ಸೂತ್ರಕಾರರಾದರೂ ಶ್ರವಣ-ಮನನಗಳಿಂದ ಸರ್ವಪರಿಜ್ಞಾನವು ಸರ್ವಾಧಿಕಾರಿಕವಾದ್ದರಿಂದ ಅದನ್ನು ಮೊದಲು ಹೇಳಿದ್ದಾರೆ.

## ಉಪಸಂಹಾರಾಧಿಕರಣ

### ॥ ಓಂ ಉಪಸಂಹಾರೋಽರ್ಥಾಭೇದಾದ್ ವಿಧಿಶೇಷವತ್ ಸಮಾನೇ ಚ ಓಂ ॥ 3-3-6 ॥

ಸಮಸ್ತ ವೇದಗಳಲ್ಲಿ ಹೇಳಿರುವ ಜ್ಞಾನಾನಂದಾದಿಗುಣಗಳೂ ದೋಷಗಳ ರಾಹಿತ್ಯವೂ ಅಭಿನ್ನವಾಗಿರುವುದರಿಂದ ಅವುಗಳ ವಿಭಾಗವನ್ನು ಮಾಡದೆ ಎಲ್ಲ ಗುಣಗಳನ್ನು ದೋಷಾಭಾವವನ್ನು ಏಕಬುದ್ಧಿಯಲ್ಲಿ ವಿಷಯೀಕರಿಸಿ ಬ್ರಹ್ಮನ ಉಪಾಸನೆಯನ್ನು ಮಾಡಬೇಕು. ಸಂಧ್ಯಾವಂದನಾದಿ ವಿಧಿವಿಹಿತಕರ್ಮಗಳನ್ನು ಅವಶ್ಯವಾಗಿ ಮಾಡುವಂತೆ ಇದೂ ಸಹ ವಿಹಿತವಾದ್ದರಿಂದ ಹೀಗೆಯೇ ಮಾಡಬೇಕು. ಯೋಗ್ಯವಾದ ಗುಣಗಳ ಉಪಾಸನೆಯನ್ನು ಮಾತ್ರ ಮಾಡಬೇಕು. ರೋದನಾದಿಗಳ ಉಪಸಂಹಾರವನ್ನು ಮಾಡಬಾರದು. ತಮ್ಮ ಶಕ್ತಿಗನುಗುಣವಾಗಿ ಉಪಸಂಹಾರ ಅನುಪಸಂಹಾರಗಳನ್ನು ಮಾಡಬೇಕು. ಎಲ್ಲರಿಗೂ ಸರ್ವಗುಣಗಳ ಉಪಾಸನೆಯು ಅಸಾಧ್ಯ.

**ಅಣುಭಾಷ್ಯ:- 'ಬ್ರಹ್ಮಣಾ ತ್ವಖಿಲೈರ್ಗುಣೈಃ ಉಪಾಸ್ಯಃ ಸರ್ವವೇದೈಶ್ಚ'**

**ಭಾವಾರ್ಥ:-** ಬ್ರಹ್ಮದೇವರಿಗೆ ಮಾತ್ರ ಎಲ್ಲ ಗುಣಗಳಿಂದ ಪರಮಾತ್ಮನು ಉಪಾಸ್ಯನಾಗಿದ್ದಾನೆ. ಉಳಿದವರಿಗೆ ಅವರವರ ಯೋಗ್ಯತೆಗನುಗುಣವಾಗಿ ಉಪಾಸ್ಯನಾಗಿದ್ದಾನೆ.

## ಪ್ರಾಪ್ತ್ಯಧಿಕರಣ

### ॥ ಓಂ ಪ್ರಾಪ್ತೇಶ್ಚ ಸಮಂಜಸಮ್ ಓಂ ॥ 3-3-10 ॥

ಉಪಸಂಹಾರ-ಅನುಪಸಂಹಾರಗಳೆರಡೂ ವಿರುದ್ಧವಲ್ಲ. 'ಯಸ್ಯ ಯಾವದ್ಗುಣಾಃ ಸ್ಪಷ್ಟಂ ಪ್ರತಿಭಾಸಯಂತ್ಯುಪಾಸನೇ ಯುಗಪತ್ ಸ್ವಭುಜೌ ಯದ್ವತ್ ಧ್ಯಾಯೇತ್ ತಾವತ ಏವ ಸಃ' ಎಂಬ ಪ್ರಮಾಣವಾಕ್ಯದಂತೆ ಅವರವರ ಯೋಗ್ಯತೆಯನ್ನನುಸರಿಸಿ ಎರಡೂ ಸಹ ಯುಕ್ತವೇ ಆಗಿದೆ.

**ಅಣುಭಾಷ್ಯ:-** **'ಸರ್ವೈರಪಿ ಯಥಾಬಲಮ್'**

**ಭಾವಾರ್ಥ:-** ಈ ಸೂತ್ರದ ಅಭಿಪ್ರಾಯವನ್ನು 'ಸರ್ವೈರಪಿ ಯಥಾಬಲಮ್' ಎಂಬ ಅಣುಭಾಷ್ಯದಲ್ಲಿ ಸಂಗ್ರಹಿಸಲಾಗಿದೆ. ಧ್ಯಾನಕಾಲದಲ್ಲಿ ಯಾರಿಗೆ ಎಷ್ಟು ಗುಣಗಳು ಪ್ರತೀತವಾಗುತ್ತವೆಯೋ ಅಷ್ಟು ಗುಣಗಳ ಉಪಸಂಹಾರವನ್ನು ಮಾಡಬೇಕು. ಬ್ರಹ್ಮದೇವರಿಗೆ ಮಾತ್ರ ಒಂದೇ ಕಾಲದಲ್ಲಿ ಹೆಚ್ಚಿನಗುಣಗಳ ಪ್ರತೀತಿಯು, ಉಳಿದವರಿಗೆ 'ಯಥಾಬಲಂ' ಅವರವರ ಯೋಗ್ಯತೆಗನುಗುಣವಾಗಿ ಬಹುಗುಣಗಳ ಪ್ರತೀತಿಯು ಆಗುತ್ತದೆ. ಮನುಷ್ಯೋತ್ತಮರಿಗೆ ಕೇವಲ ನಾಲ್ಕುಗುಣಗಳ ಪ್ರತೀತಿಯು. ಅವರಿಗಿಂತಲೂ ಕೆಳಗಿನವರಿಗೆ ಆತ್ಮತ್ವರೂಪ ಒಂದೇಗುಣವು ತೋರುವುದು.

## ಸರ್ವಾಭೇದಾಧಿಕರಣ

### ॥ ಓಂ ಸರ್ವಾಭೇದಾದನ್ಯತ್ರೇಮೇ ಓಂ ॥ 3-3-11 ॥

ಗುಣಗಳ ವಿಭಾಗವಿಲ್ಲದೆ ಸರ್ವಗುಣಯುಕ್ತನನ್ನಾಗಿ ಉಪಾಸನೆ ಮಾಡುವ ಬ್ರಹ್ಮದೇವರಿಗೆ ಮೋಕ್ಷದಲ್ಲಿ ಸಂಪೂರ್ಣ ಆನಂದರೂಪ ಫಲವಿದೆ. ಹೀಗೆ ಫಲದಲ್ಲಿ ತಾರತಮ್ಯವಿರುವುದರಿಂದ ಸಾಧನದಲ್ಲೂ ತಾರತಮ್ಯವು ನಿಶ್ಚಿತವಾಗುತ್ತದೆ.

## ಆನಂದಾಧಿಕರಣ

ಸಮಸ್ತ ಮುಮುಕ್ಷುಗಳಿಂದ ಉಪಾಸಿಸಲ್ಪಡಬೇಕಾದ ಪರಮಾತ್ಮನ ಗುಣಗಳ ಸಂಖ್ಯೆ ಮತ್ತು ಆ ಗುಣಗಳು ಯಾವುವು ಎಂಬ ವಿಷಯದಲ್ಲಿ ಯಾವ ನಿಯಮವೂ ಇಲ್ಲ. ಆದ್ದರಿಂದ ಉಪಾಸನೆಯು ಅವಶ್ಯಕರ್ತವ್ಯವಲ್ಲ ಎಂಬ ಆಕ್ಷೇಪಕ್ಕೆ ಪರಿಹಾರವಾಗಿ 'ಆನಂದಾದಯಃ ಪ್ರಧಾನಸ್ಯ' ಎಂಬ ಸೂತ್ರವು ಪ್ರವೃತ್ತವಾಗಿದೆ.

**|| ಓಂ ಆನಂದಾದಯಃ ಪ್ರಧಾನಸ್ಯ ಓಂ || 3-3-12 ||**

ಮೋಕ್ಷಪ್ರಾಪ್ತಿಗಾಗಿ ಜ್ಞಾನ, ಆನಂದ, ದೋಷರಹಿತತ್ವ, ಸ್ವಾಮಿತ್ವ ಈ ನಾಲ್ಕು ಗುಣಗಳ ಉಪಾಸನೆಯು ಎಲ್ಲರಿಗೂ ಅವಶ್ಯವಾಗಿದೆ.

**ಅಣುಭಾಷ್ಯ:- 'ಸಚ್ಚಿದಾನಂದ ಆತ್ಮೇತಿ ಮಾನುಷ್ಯೈಸ್ತು'**

**ಭಾವಾರ್ಥ:-** ಈ ವಾಕ್ಯದಲ್ಲಿ ಅಧಿಕರಣ ಸಾರವನ್ನು ಸೆರೆಹಿಡಿದ್ದಾರೆ. ಮಂದರು, ಮಧ್ಯಮರು, ಉತ್ತಮರು ಈ ಮೂವರಿಂದಲೂ ಉಪಾಸ್ಯವಾದ ಗುಣವನ್ನು ಇಲ್ಲಿ ಹೇಳಿದ್ದಾರೆ. ಸತ್ = ದೋಷರಹಿತ, ಚಿತ್ = ಜ್ಞಾನರೂಪ, ಆನಂದರೂಪ, ಆತ್ಮ = ಸ್ವಾಮಿ ಈ ನಾಲ್ಕು ಗುಣಗಳಿಂದ ಎಲ್ಲರೂ ಭಗವಂತನ ಉಪಾಸನೆಯನ್ನು ಮಾಡಬೇಕು. ನಿರ್ದೋಷಜ್ಞಾನಾನಂದದ ಅಭಿವ್ಯಕ್ತಿರೂಪ ಮೋಕ್ಷವು ಸರ್ವಸಾಧಕರಿಂದಲೂ ಪ್ರಾಪ್ಯವಾದದ್ದಾಗಿದೆ, ಸ್ವಾಮಿ ಎಂಬ ಉಪಾಸನೆಯು ಭಗವಂತನ ಪ್ರೀತಿಗೆ ಕಾರಣವಾದದ್ದು. 'ಆದತ್ತೇ ಇತಿ ಆತ್ಮಾ' ಭಕ್ತರನ್ನು ಸ್ವೀಕರಿಸುವವನು ಆದ್ದರಿಂದ ಪರಮಾತ್ಮನು ಆತ್ಮ ಎನಿಸುವನು. ಆದ್ದರಿಂದ ಈ ಉಪಾಸನೆಯು ಎಲ್ಲರಿಗೂ ಸಮಾನವಾಗಿದೆ.

'ಸಚ್ಚಿದಾನಂದ ಆತ್ಮೇತಿ ಬ್ರಹ್ಮೋಪಾಸಾ ವಿನಿಶ್ಚಿತಾ ।
ಸರ್ವೇಷಾಂ ಚ ಮುಮುಕ್ಷೂಣಾಂ ಫಲಸಾಮ್ಯಾದಪೇಕ್ಷಿತಾ' ॥

ಎಲ್ಲ ಮುಮುಕ್ಷುಗಳೂ ನಾಲ್ಕು ಗುಣಗಳ ಉಪಾಸನೆಯನ್ನು ಮಾಡಬೇಕೆಂದು ಸ್ಮೃತಿಗಳು ಹೇಳುತ್ತಿವೆ.

## ಪ್ರಿಯಶಿರಸ್ತ್ವಾದ್ಯಧಿಕರಣ

**|| ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ || 3-3-13 ||**

ಪ್ರಿಯಶಿರಸ್ತ್ವಾದಿ ಗುಣಗಳು ಸರ್ವರಿಂದಲೂ ಉಪಾಸ್ಯವಲ್ಲ. ಆನಂದಾದಿ ಫಲದಲ್ಲಿ ಭೇದವು ಪ್ರಮಾಣಸಿದ್ಧವಾದ್ದರಿಂದ ಸಾಧನವಾದ ಉಪಾಸನೆಯಲ್ಲೂ ತಾರತಮ್ಯವು ಅಗತ್ಯವಾಗಿದೆ. ಪ್ರಿಯಶಿರಸ್ತ್ವಾದಿಗಳು ಮನುಷ್ಯರಿಂದ ಪ್ರಾಪ್ಯವಲ್ಲ. ಆದ್ದರಿಂದ ಉಪಾಸ್ಯವಲ್ಲ.

**ಅಣುಭಾಷ್ಯ:- 'ಯಥಾಕ್ರಮಮ್'**

**ಭಾವಾರ್ಥ:-** ಅವರವರ ಯೋಗ್ಯತೆಗನುಗುಣವಾಗಿ ಗುಣಗಳ ಉಪಾಸನೆಯನ್ನು ಮಾಡಬೇಕು. ಪ್ರಿಯಶಿರಸ್ತ್ವಾದಿಗಳು ಎಲ್ಲರಿಂದಲೂ ಪ್ರಾಪ್ಯವಾದದ್ದಲ್ಲ.

## ಫಲಸಾಮ್ಯಾಧಿಕರಣ

**|| ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ || 3-3-14 ||**

ಜ್ಞಾನಾನಂದಾದಿ ವ್ಯತಿರಿಕ್ತವಾದ ಗುಣಗಳ ಉಪಾಸನೆಯನ್ನೂ ದೇವತೆಗಳು ಅಗತ್ಯವಾಗಿ ಮಾಡಬೇಕು. ಅವರವರಿಂದ ಅಪೇಕ್ಷಿತವಾದ ಹಾಗು ಪ್ರಾಪ್ಯವಾದ ಫಲವನ್ನು ನಿರ್ಣಯಿಸಿ ಸಾಧನನಿರ್ಣಯವನ್ನು ಮಾಡಬೇಕು. ಸರ್ವಜ್ಞರಾದ ಗುರುಗಳ ಉಪದೇಶದಿಂದ ಯೋಗ್ಯತೆಯ ನಿರ್ಣಯವು ಸಾಧ್ಯವಾಗಿದೆ.

**ಅಣುಭಾಷ್ಯ:- 'ಸುರೇಶ್ವರೈರ್ಯಥಾಕ್ರಮಂ ಬಹುಗುಣೈಃ'**

**ಭಾವಾರ್ಥ:-** ಮನುಷ್ಯರಿಗಿಂತಲೂ ಅಧಿಕಫಲವು ದೇವತೆಗಳಿಗಿರುವುದರಿಂದ ಅವರವರ ಯೋಗ್ಯತೆಗನುಗುಣವಾಗಿ ಹೆಚ್ಚಿನ ಗುಣಗಳಿಂದ ಉಪಾಸನೆಯನ್ನು ದೇವತೆಗಳು ಮಾಡಬೇಕು. ಅವರು ದೇವತೆಗಳಾಗಿ ಲೋಕಗಳಿಗೆ ಈಶ್ವರರಾಗಿದ್ದಾರೆ. ಆದ್ದರಿಂದ ಹೆಚ್ಚಿನ ಯೋಗ್ಯತೆಯನ್ನು ಹೊಂದಿರುತ್ತಾರೆ. 'ಸಚ್ಚಿದಾನಂದ ಆತ್ಮೇತಿ' ಎಂಬಲ್ಲಿ 'ಇತಿ'ಶಬ್ದವು ಮುಂತಾದ ಎಂಬ ಅರ್ಥವುಳ್ಳದ್ದು. ಸಚ್ಚಿದಾನಂದ ಆತ್ಮವೇ ಮುಂತಾದ ಬಹುಗುಣಗಳಿಂದ ವಿಷ್ಣುವೇ ದೇವತೆಗಳಿಂದ ಉಪಾಸ್ಯನಾಗಿದ್ದಾನೆ.

## ಆಧ್ಯಾನಾಧಿಕರಣ

### ॥ ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ ॥ 3-3-15 ॥

ಸರ್ವವಿದ್ಯೆಗಳೂ ಭಗವಂತನ ಗುಣಗಳನ್ನೂ ಹೇಳುತ್ತಿರುವುದರಿಂದ ಭಗವದ್ಗುಣಾಭಿಧಾಯಕವಾಗಿವೆ. ಗುಣೋಪಸಂಹಾರಪೂರ್ವಕ ಧ್ಯಾನಕ್ಕಾಗಿ ಗುಣಗಳನ್ನು ಹೇಳುವುದು. ಇದರಿಂದಲೇ ಸರ್ವಗುಣೋಪಸಂಹಾರವನ್ನು ಮಾಡಬೇಕೆಂದು ನಿರ್ಣಯವಾಗುವುದು.

## ಆತ್ಮಗೃಹೀತ್ಯಧಿಕರಣ

### ॥ ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ ॥ 3-3-17 ॥

'ಆತ್ಮೇತ್ಯೇವೋಪಾಸೀತ' ಎಂಬಲ್ಲಿರುವ ಆತ್ಮಶಬ್ದವು ಆನಂದಾದಿ ನಾಲ್ಕುಗುಣಗಳನ್ನು ಹೇಳುತ್ತಿದೆ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಯಲ್ಲಿರುವ ಸತ್ಯಶಬ್ದವು ಹೇಗೆ ಜೀವಕತ್ವ, ವಿನಾಶಕತ್ವಾದಿ ಅನೇಕಗುಣಗಳನ್ನು ಹೇಳುತ್ತಿದೆಯೋ ಅದರಂತೆ ಆತ್ಮಶಬ್ದವೂ ಸಹ. ಏಕೆಂದರೆ 'ಅತ್ರ ಹ್ಯೇತೇ ಸರ್ವ ಏಕೀಭವಂತಿ' ಎಂಬ ಉತ್ತರ ಶ್ರುತಿಯಲ್ಲಿ ಎಲ್ಲ ಗುಣಗಳೂ ಆತ್ಮಶಬ್ದದಿಂದ ವಾಚ್ಯವಾಗಿದೆ ಎಂದು ಹೇಳಲಾಗಿದೆ.

## ಅನ್ವಯಾಧಿಕರಣ

### ॥ ಓಂ ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ಓಂ ॥ 3-3-18 ॥

'ಆಪ್ತವ್ಯಾಪ್ತೇರಾತ್ಮಶಬ್ದಃ ಪರಮಸ್ಯ ಪ್ರಯುಜ್ಯತೇ' ಎಂಬ ವಾಕ್ಯಾನುಸಾರ ಆತ್ಮಶಬ್ದದಲ್ಲಿ ಸಮಸ್ತಗುಣಗಳು ಅನ್ವಯವನ್ನು ಪಡೆದಿವೆ. ಆದರೂ ಎಲ್ಲ ಸಾಧಕರೂ ಸರ್ವಗುಣೋಪಸಂಹಾರವನ್ನು ಮಾಡಬಾರದು. ಬ್ರಹ್ಮದೇವರಿಗೆ ಎಲ್ಲ ಗುಣಗಳನ್ನು ಹೇಳಿದರೂ ಇತರರಿಗೆ ಅವರವರ ಯೋಗ್ಯತೆಗನುಸಾರವಾಗಿ ಆತ್ಮಶಬ್ದದಿಂದ ಗುಣಗಳ ಪ್ರತೀತಿಯಾಗುವುದು.

**ಅಣುಭಾಷ್ಯ:- 'ಸರ್ವೈರಪಿ ಯಥಾಕ್ರಮಮಾತ್ಮೇತ್ಯುಪಾಸ್ಯಃ'**

**ಭಾವಾರ್ಥ:-** ಈ ಎಲ್ಲ ಅಧಿಕರಣಗಳ ಸಾರವನ್ನು ಈ ವಾಕ್ಯದಿಂದ ಸಂಗ್ರಹಿಸಿದ್ದಾರೆ.

## ಕಾರ್ಯಾಧಿಕರಣ

### ॥ ಓಂ ಕಾರ್ಯಾಖ್ಯಾನಾದಪೂರ್ವಮ್ ಓಂ ॥ 3-3-19 ॥

ಉಪಾಸನೆಯ ಫಲವಾದ ಮೋಕ್ಷವು ಅಲೌಕಿಕವಾದ್ದರಿಂದ ವಿಷ್ಣುವಿನ ಆನಂದಾದಿಗುಣಗಳೂ ಅಲೌಕಿಕವೆಂದೇ ಉಪಾಸಿಸಬೇಕು.

**ಅಣುಭಾಷ್ಯ:- 'ಬ್ರಹ್ಮಣಾ ತ್ವಖಿಲೈರ್ಗುಣೈಃ'**

ಅಲೌಕಿಕವಾದ ಗುಣಗಳ ಪ್ರತೀತಿ ಇಲ್ಲ. ಆದ್ದರಿಂದ ಧ್ಯಾನವು ಅಸಾಧ್ಯ ಎನ್ನಬಾರದು. ಭಗವಂತನ ಗುಣಗಳ ಸಾಕ್ಷಾತ್ಕಾರವನ್ನು ಹೊಂದಿರುವ ಜ್ಞಾನಿಗಳ ಉಪದೇಶದಿಂದ ಮತ್ತು ಸಾದೃಶ್ಯದ ಮೂಲಕವಾಗಿ ಜ್ಞಾನವು ದೊರೆಯುತ್ತದೆ. ಪರಮಾತ್ಮನಗುಣಗಳು ಅತ್ಯುತ್ತಮ ಲೋಕವಿಲಕ್ಷಣ ಎಂದು ತಿಳಿದರೂ ಫಲಪ್ರಾಪ್ತಿಯಾಗುತ್ತದೆ.

**ಭಾವಾರ್ಥ:-** ಈ ವಾಕ್ಯದಲ್ಲಿರುವ 'ತು' ಶಬ್ದವು ಅಲೌಕಿಕಗುಣ-ರೂಪ ವಿಶೇಷವನ್ನು ಸೂಚಿಸುತ್ತದೆ. ಇದರಿಂದ ಈ ಅಧಿಕರಣಾರ್ಥವನ್ನು ಸಂಗ್ರಹಿಸಿದ್ದಾರೆ.

## ಸಮಾನಾಧಿಕರಣ

### ॥ ಓಂ ಸಮಾನ ಏವಂ ಚಾಭೇದಾತ್ ಓಂ ॥ 3-3-20 ॥

ಯೋಗ್ಯವಾದ ಗುಣಗಳನ್ನು ಮಾತ್ರ ಉಪಾಸಿಸಬೇಕೆಂಬ ನಿಯಮವಿರುವುದರಿಂದ, ತ್ರಿವಿಕ್ರಮತ್ವಾದಿ ಕ್ರಿಯೆಗಳು ಅಲೌಕಿಕವಾಗಿದ್ದರೂ ಸರಸ್ವತಿಯು ಆ ಗುಣಗಳ ಉಪಾಸನೆಯನ್ನು ಮಾಡುವುದಿಲ್ಲ. ತ್ರಿವಿಕ್ರಮತ್ವಾದಿಗಳು ನಿತ್ಯವಿಕ್ರಾಂತ್ಯಾದಿಗಳಲ್ಲೇ ಅಂತರ್ಭಾವವನ್ನು ಹೊಂದಿವೆ. ನಿತ್ಯವಿಕ್ರಾಂತ್ಯಾದಿ ಸಾಮಾನ್ಯಕ್ರಿಯೆಗಳು ಸರಸ್ವತಿಯಿಂದ ಉಪಾಸ್ಯವಾಗಿವೆ. ಬ್ರಹ್ಮದೇವರು ತ್ರಿವಿಕ್ರಮತ್ವಾದಿ ಕ್ರಿಯೆಗಳನ್ನು ಪ್ರತ್ಯೇಕವಾಗಿಯೇ ಉಪಾಸಿಸುತ್ತಾರೆ.

**ಅಣುಭಾಷ್ಯ:- 'ಯಥಾಕ್ರಮಮ್'**

**ಭಾವಾರ್ಥ:-** ತಮ್ಮಿಂದ ಪ್ರಾಪ್ಯವಾದ ಫಲಾನುಸಾರವಾಗಿ ವಿಷ್ಣುವು ಉಪಾಸ್ಯನಾಗಿದ್ದಾನೆ.

## ವಿಶೇಷಾಧಿಕರಣ

### ॥ ಓಂ ನ ವಾ ವಿಶೇಷಾತ್ ಓಂ ॥ 3-3-22 ॥

ಆತ್ಮಪದವು ವಿಷ್ಣುವಿನ ಸಮಸ್ತಗುಣಗಳನ್ನು ಹೇಳುತ್ತಿದ್ದರೂ ಉಪಾಸಕನ ಯೋಗ್ಯತೆಗನುಗುಣವಾಗಿ ಗುಣಗಳನ್ನು ತಿಳಿಸುವುದು. ಎಲ್ಲ ಉಪಾಸಕರು ಆತ್ಮ ಎಂದು ಉಪಾಸನೆ ಮಾಡುವಾಗ ಎಲ್ಲ ಗುಣಗಳನ್ನು ಉಪಾಸಿಸಬೇಕಾಗಿಲ್ಲ. ಧ್ಯಾನಕಾಲದಲ್ಲಿ ಉಪಾಸಕನಿಗೆ ಆತ್ಮಶಬ್ದದಿಂದ ಎಷ್ಟು ಗುಣಗಳು ಭಾಸವಾಗುವುದೋ ಅಷ್ಟು ಗುಣಗಳ ಉಪಾಸನೆಯನ್ನು ಅವನು ಮಾಡಬೇಕು.

**ಅಣುಭಾಷ್ಯ:-** **'ಯಥಾಕ್ರಮಂ ಬಹುಗುಣೈರ್ಬ್ರಹ್ಮಣಾ ತ್ವಖಿಲೈರ್ಗುಣೈಃ'**

**ಭಾವಾರ್ಥ:-** ಬ್ರಹ್ಮದೇವರಿಗೆ ಎಲ್ಲ ಗುಣಗಳಿಂದಲೂ ವಿಷ್ಣುವು ಉಪಾಸ್ಯನಾಗಿದ್ದಾನೆ.

## ಸಂಭೃತ್ಯಧಿಕರಣ

### ॥ ಓಂ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ಓಂ ॥ 3-3-24 ॥

ಸಂಭೃತಿ = ಪೋಷಣೆ, ದ್ಯುವ್ಯಾಪ್ತಿ = ಪ್ರಕಾಶದಿಂದ ವ್ಯಾಪ್ತಿ ಇವೆರಡೂ ಎಲ್ಲರಿಂದಲೂ ಉಪಾಸ್ಯವಲ್ಲ. ಮನುಷ್ಯರಿಗೆ ಅವುಗಳ ಉಪಾಸನೆ ಮಾಡುವ ಯೋಗ್ಯತೆ ಇಲ್ಲ. ದೇವತೆಗಳಿಂದ ಮಾತ್ರ ಆ ಗುಣಗಳು ಉಪಾಸ್ಯಗಳಾಗಿವೆ.

**ಅಣುಭಾಷ್ಯ:- 'ಸಚ್ಚಿದಾನಂದ ಆತ್ಮೇತಿ ಮಾನುಷೈಸ್ತು ಸುರೇಶ್ವರೈಃ'**

**ಭಾವಾರ್ಥ:-** 'ಸಚ್ಚಿದಾನಂದ-ಆತ್ಮೇತಿ ಮಾನುಷೈಃ'; ಸಚ್ಚಿದಾನಂದ ಆತ್ಮ ಎಂದು ನಾಲ್ಕು ಗುಣಗಳನ್ನು ಮಾತ್ರ ಮನುಷ್ಯರು ಉಪಾಸನೆ ಮಾಡಬೇಕು. ಇತರವಾದ ಸಂಭೃತಿ-ದ್ಯುವ್ಯಾಪ್ತಿಗಳ ಉಪಾಸನೆಯನ್ನು ಮಾಡಬಾರದು.

# ಪುರುಷವಿದ್ಯಾಧಿಕರಣ

## ॥ ಓಂ ಪುರುಷವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್ ಓಂ ॥ 3-3-25 ॥

ವಿದ್ಯೆಗಳಲ್ಲಿಯೇ ಉತ್ತಮವಾದ ಪುರುಷಸೂಕ್ತ ವಿದ್ಯೆಯಲ್ಲೂ ಸಹ ವಿಷ್ಣುವಿನ ಕೆಲವೇ ಗುಣಗಳನ್ನು ಹೇಳಿದ್ದಾರೆ. ಎಲ್ಲಾ ಗುಣಗಳನ್ನೂ ಹೇಳದಿರುವುದರಿಂದ ಸರ್ವವಿದ್ಯೆಗಳಿಂದ ಸರ್ವಗುಣೋಪಸಂಹಾರವನ್ನು ಮಾಡಬೇಕೆಂದು ತಿಳಿಯುವುದು.

**ಅಣುಭಾಷ್ಯ:- 'ಬ್ರಹ್ಮಣಾ ತ್ವಖಿಲೈರ್ಗುಣೈಃ'**

# ವೇಧಾದ್ಯಧಿಕರಣ

## ॥ ಓಂ ವೇಧಾದ್ಯರ್ಥಭೇದಾತ್ ಓಂ ॥ 3-3-26 ॥

ದುಷ್ಟಜನರನ್ನು ಸೀಳುವುದು, ಕಡಿಯುವುದು ಮೊದಲಾದ ಈಶ್ವರನ ಗುಣಗಳು ಸರ್ವರಿಂದಲೂ ಉಪಾಸ್ಯವಲ್ಲ. ದುಷ್ಟನಿಗ್ರಹವೇ ಆ ಉಪಾಸನೆಯ ಫಲ. ಯತ್ಯಾಶ್ರಮಿಗಳೇ ಮುಂತಾದವರಿಗೆ ಅದರಲ್ಲಿ ಅಧಿಕಾರವಿಲ್ಲ. ಅಯೋಗ್ಯೋಪಾಸನೆಯಿಂದ ಅನರ್ಥಪ್ರಾಪ್ತಿಯಾಗುತ್ತದೆ.

**ಅಣುಭಾಷ್ಯ:- 'ಯಥಾಕ್ರಮಮ್'**

ಭಾವಾರ್ಥ:- ಸಾಧಕನ ಯೋಗ್ಯತಾನುಸಾರವಾಗಿ ಅವರಿಂದ ಹೊಂದಲು ಯೋಗ್ಯವಾದ ಫಲಾನುಗುಣವಾದ ಉಪಾಸನೆಯನ್ನು ಮಾಡಬೇಕು. ಯತಿಯೇ ಮುಂತಾದವರಿಂದ ಸೀಳುವುದೇ ಮುಂತಾದ ಗುಣಗಳು ಉಪಾಸ್ಯವಲ್ಲ.

# ಮುಕ್ತೋಪಾಸನಾಧಿಕರಣ

## ॥ ಓಂ ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಚ್ಛಂದಸ್ತುತ್ಯುಪಗಾನವತ್ತದುಕ್ತಮ್ ಓಂ ॥ 3-3-27 ॥

ಉಪಾಸನಾಸಿದ್ಧಿಯು ಮೋಕ್ಷಕ್ಕಾಗಿ ಇರುವುದರಿಂದ ಮೋಕ್ಷವು ಹೊಂದಲ್ಪಟ್ಟಿರುವುದರಿಂದ ಅವರು ವಿಧಿಬದ್ಧರಾಗಿ ಉಪಾಸನೆ ಮಾಡುವುದಿಲ್ಲ. ಮುಕ್ತಿಯಲ್ಲಿ ಮುಕ್ತರು ಸ್ವೇಚ್ಛೆಯಿಂದಲೇ ಉಪಾಸನೆಯನ್ನು ಮಾಡುತ್ತಾರೆ. ಈ ವಿಷಯದಲ್ಲಿ 'ಏತತ್ ಸಾಮ ಗಾಯನ್ನಾಸ್ತೇ' ಮುಂತಾದ ಶ್ರುತಿ-ಸ್ಮೃತಿಗಳೇ ಪ್ರಮಾಣ. ನಿಯತ ಬ್ರಹ್ಮಯಜ್ಞಾನಂತರದಲ್ಲಿಯೂ ಬ್ರಾಹ್ಮಣರು ಸ್ವೇಚ್ಛೆಯಿಂದಲೇ ಕುಶವನ್ನು ಧರಿಸಿ ಮಂತ್ರಾಧ್ಯಯನವನ್ನು ಮಾಡುವರು. ಸಾಮಗಾನ ಮಾಡುವರು. ಅದರಂತೆಯೇ ಸ್ವೇಚ್ಛೆಯಿಂದಲೇ ಮುಕ್ತರು ಉಪಾಸನೆಯನ್ನು ಮಾಡುವರು.

**ಅಣುಭಾಷ್ಯ:-** 'ಸರ್ವೈರಪ್ಯುಪಾಸ್ಯಃ'

**ಭಾವಾರ್ಥ:-** ಸಂಸಾರಿಗಳಿಂದ ಹಾಗು ಮುಕ್ತರಿಂದಲೂ ವಿಷ್ಣುವು ಉಪಾಸ್ಯನಾಗಿದ್ದಾನೆ.

## ಛಂದಾಧಿಕರಣ

### ॥ ಓಂ ಛಂದತ ಉಭಯಾವಿರೋಧಾತ್ ಓಂ ॥ 3-3-29 ॥

ಮುಕ್ತರಿಗೆ ಕರ್ಮ ಮಾಡದಿದ್ದರೆ ಪ್ರತ್ಯವಾಯವಿಲ್ಲ. ಕರ್ಮಮಾಡಬೇಕೆಂಬ ವಿಧಿಯೂ ಇಲ್ಲ. ಆದರೂ ಸ್ವೇಚ್ಛೆಯಿಂದಲೇ ಕೆಲವೊಮ್ಮೆ ಕರ್ಮ ಮಾಡುವರು, ಕೆಲವೊಮ್ಮೆ ಮಾಡುವುದಿಲ್ಲ.

**ಅಣುಭಾಷ್ಯ:-** 'ವಿಶೇಷಸ್ತು ಜ್ಞಾನೇ ಸ್ಯಾತ್'

**ಭಾವಾರ್ಥ:-** ಜ್ಞಾನೇ = ಜ್ಞಾನಜನ್ಯವಾದ ಮೋಕ್ಷದಲ್ಲಿ, ವಿಶೇಷಃ ಸ್ಯಾತ್ = ಸಂಸಾರಿಗಿಂತಲೂ ಮುಕ್ತನಿಗೆ ಕರ್ಮದಲ್ಲಿ ವಿಶೇಷವಿದೆ. ಸಂಸಾರಿಗಳು ವಿಧಿಬದ್ಧರು. ಆದ್ದರಿಂದ ಕರ್ಮದ ನಿಯಮವಿದೆ. ಮುಕ್ತರಿಗೆ ಕರ್ಮದ ನಿಯಮವಿಲ್ಲ. ಇದೇ ವಿಶೇಷ.

## ಅನಿಯಮಾಧಿಕರಣ

### ॥ ಓಂ ಅನಿಯಮಃ ಸರ್ವೇಷಾಮವಿರೋಧಾತ್ ಶಬ್ದಾನುಮಾನಾಭ್ಯಾಮ್ ಓಂ ॥ 3-3-32 ॥

ಅಪರೋಕ್ಷಜ್ಞಾನಿಗಳೆಲ್ಲರಿಗೂ ಮೋಕ್ಷವು ನಿಶ್ಚಿತ. ಕೆಲವರಿಗೆ ಮೋಕ್ಷ. ಕೆಲವರಿಗೆ ಮೋಕ್ಷವಿಲ್ಲ ಎಂಬ ವ್ಯವಸ್ಥೆ ಇಲ್ಲ. ಅಪರೋಕ್ಷಜ್ಞಾನಿಗಳೆಲ್ಲರಿಗೂ ಮೋಕ್ಷವೆಂದಾಗ ಯಾವ ಬಾಧಕವೂ ಇಲ್ಲ. 'ನ ಕಶ್ಚಿತ್ ಬ್ರಹ್ಮವಿತ್ ಸ್ಮೃತಿಮನುಭವತಿ ಮುಕ್ತೋ ಹ್ಯೇವ ಭವತಿ' ಎಂಬ ಶ್ರುತಿಯು ಅಪರೋಕ್ಷಜ್ಞಾನಿಗಳಿಗೆ ಸಂಸಾರವಿಲ್ಲ ಎಂದೇ ಹೇಳುತ್ತಿದೆ. ಅಪರೋಕ್ಷಜ್ಞಾನಿತ್ವವು ಎಲ್ಲ ಜ್ಞಾನಿಗಳಲ್ಲೂ ಸಮಾನವಾದ್ದರಿಂದ ಎಲ್ಲ ಜ್ಞಾನಿಗಳಿಗೂ ಮೋಕ್ಷವಿದೆ ಎಂದು ಅನುಮಾನವೂ ಪ್ರಮಾಣವಾಗಿದೆ.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾತ್'**

**ಭಾವಾರ್ಥ:-** ಜ್ಞಾನೇ = ಅಪರೋಕ್ಷಜ್ಞಾನವುಂಟಾಗುತ್ತಿರಲು, ವಿಶೇಷಃ = ಮೋಕ್ಷವು, ಸ್ಯಾತ್ ತು = ನಿಶ್ಚಯವಾಗಿ ಆಗುತ್ತದೆ.

## ಯಾವದಧಿಕರಣ

**।। ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ ಓಂ ।। 3-3-33 ।।**

ಮೋಕ್ಷದಲ್ಲಿ ಆನಂದಾದಿಗಳ ತಾರತಮ್ಯಕ್ಕೆ ಉಪಾಸನಾಪ್ರಯತ್ನದಲ್ಲಿರುವ ತಾರತಮ್ಯವು ಕಾರಣವಲ್ಲ. ಹೀಗೆ ಹೇಳಿದರೆ ಉಪಾಸನಾಯೋಗ್ಯತೆಯ ನಿಯಮವೇ ಇಲ್ಲದಂತಾಗುತ್ತದೆ. ಉಪಾಸನಾಪ್ರಯತ್ನತಾರತಮ್ಯವು ಯೋಗ್ಯತಾತಾರತಮ್ಯದ ಅಧೀನವಾಗಿದೆ. ಮುಕ್ತಿಯಲ್ಲಿ ಸುಖಾದಿತಾರತಮ್ಯಕ್ಕೆ ಹಿಂದಿನ ಯೋಗ್ಯತಾ ತಾರತಮ್ಯವೇ ಕಾರಣ.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್'**

**ಭಾವಾರ್ಥ:-** ಜ್ಞಾನೇ = ಜ್ಞಾನಜನ್ಯವಾದ ಮೋಕ್ಷದಲ್ಲಿ, ಉತ್ತರೋತ್ತರಮ್ = ಮನುಷ್ಯೋತ್ತಮರಿಂದ ಆರಂಭಿಸಿ ಬ್ರಹ್ಮಪರ್ಯಂತವಾಗಿ, ವಿಶೇಷಃ ಸ್ಯಾತ್ = ತಾರತಮ್ಯವಿರುವುದು. ಸಾಧನದಲ್ಲಿ ತಾರತಮ್ಯವಿಲ್ಲದೆ ಫಲದಲ್ಲಿ ತಾರತಮ್ಯವು ಯುಕ್ತವಾಗುವುದಿಲ್ಲ. ಆದ್ದರಿಂದ ಉಪಾಸನೆಯಲ್ಲಿ ತಾರತಮ್ಯವಿರಬೇಕು.

## ಇಯದಾಮನನಾಧಿಕರಣ

**।। ಓಂ ಇಯದಾಮನನಾತ್ ಓಂ ।। 3-3-35 ।।**

'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂದು ಶ್ರುತಿಯು ಇರುವುದರಿಂದ ಪ್ರಾಣನಿಗಿಂತ ಉತ್ತಮ ಉಪಾಸಕನಿಲ್ಲ. ಪ್ರಾಣನೇ ಕೊನೆಯ ಉಪಾಸಕ. ಆದ್ದರಿಂದ ಅವನೇ ಸರ್ವಗುಣೋಪಾಸಕ.

**ಅಣುಭಾಷ್ಯ:- 'ಬ್ರಹ್ಮಣಾ ತ್ವಖಿಲೈರ್ಗುಣೈಃ ಉಪಾಸ್ಯಃ'**

**ಭಾವಾರ್ಥ:-** ಈ ವಿಷಯವನ್ನು 'ಬ್ರಹ್ಮಣಾ ತ್ವಖಿಲೈರ್ಗುಣೈಃ ಉಪಾಸ್ಯಃ' ಎಂಬುದರಿಂದ ಸಂಗ್ರಹಿಸಿದ್ದಾರೆ.

## ವ್ಯತಿಹಾರಾಧಿಕರಣ

### II ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ II 3-3-38 II

'ಅಸ್ತಿ ಭಗವಃ ಆಶಾಯಾ ಭೂಯಃ ?' ಎಂಬ ನಾರದರ ಪ್ರಶ್ನೆಗೆ ಸನತ್ಕುಮಾರರು ಪ್ರಾಣಮಹತ್ವವನ್ನು ವಿವರಿಸುವರು. 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' ಪ್ರಾಣನಿಗಿಂತ ಉತ್ತಮನಾದ ಸತ್ಯನಾಮಕ ಭಗವಂತನನ್ನು ಉಪದೇಶಿಸುವವನು ಶ್ರೇಷ್ಠ ಉಪದೇಶಕ ಎನ್ನುವರು. ಹಿಂದಿನ ವಾಕ್ಯಗಳಲ್ಲಿ ಶ್ರೇಷ್ಠರು ಯಾರು? ಎಂದು ಪ್ರಶ್ನೆ ಇಲ್ಲದಿದ್ದರೂ ಅದನ್ನು ಅಧ್ಯಾಹಾರಮಾಡಬೇಕು. ಅಧ್ಯಾಹಾರ ಮಾಡಿಕೊಳ್ಳಬೇಕೆಂದು 'ತು' ಶಬ್ದವು ತಿಳಿಸುತ್ತದೆ. ಆದ್ದರಿಂದ ಸತ್ಯನಾಮಕ ವಿಷ್ಣುವಿಗೆ ಮುಖ್ಯಪ್ರಾಣನಿಗಿಂತಲೂ ಉತ್ತಮತ್ವವು ಯುಕ್ತವೇ ಆಗಿದೆ.

**ಅಣುಭಾಷ್ಯ:- 'ಬ್ರಹ್ಮಣಾ ವಿಷ್ಣುರುಪಾಸ್ಯಃ'**

**ಭಾವಾರ್ಥ:-** ಚತುರ್ಮುಖಬ್ರಹ್ಮನಿಂದ ಉಪಾಸ್ಯನಾದ್ದರಿಂದ ವಿಷ್ಣುವು ಸರ್ವೋತ್ತಮ ದೇವತೆಯಾಗಿದ್ದಾನೆ.

## ಸತ್ಯಾಧಿಕರಣ

### II ಸೈವ ಹಿ ಸತ್ಯಾದಯಃ ಓಂ II 3-3-39 II

ಸತ್ಯ, ವಿಜ್ಞಾನ, ಮತಿ, ಶ್ರದ್ಧಾ, ನಿಷ್ಠಾ, ಕೃತಿ, ಸುಖ, ಭೂಮಾ, ಅಹಮ್,

ಆತ್ಮಾ, ಪ್ರಾಣನಿಗಿಂತ ನಂತರದಲ್ಲಿ ಹೇಳಲ್ಪಟ್ಟವರೆಲ್ಲರೂ ಪರಮಾತ್ಮನೇ ಹೊರತು ಬೇರೆಯವರಲ್ಲ. ಆದ್ದರಿಂದ ಪ್ರಾಣನಿಗಿಂತ ಉತ್ತಮ ಕೇವಲ ವಿಷ್ಣುವೊಬ್ಬನೇ.

**ಅಣುಭಾಷ್ಯ:-** **'ಸ ಏವ ವಿಷ್ಣುರ್ಜ್ಞೇಯಃ'**

**ಭಾವಾರ್ಥ:-** ಸ ಏವ = ಉಪನಿಷತ್ತಿನಲ್ಲಿ ಹೇಳಲ್ಪಟ್ಟ ಸತ್ಯಾದಿಗಳೆಲ್ಲವೂ ವಿಷ್ಣುವೇ ಆಗಿದ್ದಾನೆ ಎಂದು ತಿಳಿಯಬೇಕು.

## ಕಾಮಾಧಿಕರಣ

### ॥ ಓಂ ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ ಓಂ ॥ 3-3-40 ॥

'ಸರ್ವಾಯತನಾ ಸರ್ವಕಾಲಾ ಸರ್ವೇಚ್ಛಾ ನ ಬದ್ಧಾ...' ಎಂದು ಶ್ರೀದೇವಿಗೆ ವ್ಯಾಪ್ತತ್ವವನ್ನು ಹೇಳುವ ಶ್ರುತಿಯು ಇರುವುದರಿಂದ ಭಗವಂತನ ಸಮೀಪದಲ್ಲೇ ಇರುವ ಶ್ರೀದೇವಿಯು ಭಗವಂತನ ಇಚ್ಛೆಯಿಂದಲೇ ಭೂಮಿಯಲ್ಲಿ ಅವತರಿಸುತ್ತಾಳೆ, ಹೊರತು ಕರ್ಮನಿಮಿತ್ತಳಾಗಿ ಅಲ್ಲ. ಶ್ರೀದೇವಿಯು ನಿತ್ಯಮುಕ್ತಳಾಗಿ ಕೃತಕೃತ್ಯಳಾದರೂ ನಿರುಪಾಧಿಕ ಭಕ್ತ್ಯತಿಶಯದಿಂದ ಉಪಾಸನೆ ಮಾಡುತ್ತಾಳೆ.

## ನಿರ್ಧಾರಣಾಧಿಕರಣ

### ॥ ಓಂ ತನ್ನಿರ್ಧಾರಣಾರ್ಥನಿಯಮಃ ತದ್‌ದೃಷ್ಟೇಃ ಪೃಥಗ್ ಹ್ಯಪ್ರತಿಬಂಧಃ ಫಲಮ್ ಓಂ ॥ 3-3-43 ॥

ಕೇವಲ ಶ್ರವಣ ಮನನಗಳಿಂದ ಬ್ರಹ್ಮದರ್ಶನವಾಗುವುದಿಲ್ಲ. ಶ್ರವಣದ ಫಲವಾದ ತತ್ವಜ್ಞಾನ, ಮನನದ ಫಲವಾದ ವೇದಾರ್ಥನಿಶ್ಚಯ ಇವೆರಡೂ ಬ್ರಹ್ಮದರ್ಶನಕ್ಕಿಂತ ಭಿನ್ನವಾಗಿವೆ. ಆದ್ದರಿಂದ ಬ್ರಹ್ಮದರ್ಶನಕ್ಕಾಗಿ ಧ್ಯಾನವು ಅವಶ್ಯ ಕರ್ತವ್ಯವಾಗಿದೆ. ಶ್ರವಣ-ಮನನಗಳೆರಡೂ ಸಾಕ್ಷಾತ್ತಾಗಿ ಕಾರಣವಾಗದಿದ್ದರೂ ಸಂಶಯಾದಿಗಳ ನಿವೃತ್ತಿಗೆ ಕಾರಣವಾದ್ದರಿಂದ ಎರಡೂ ಆವಶ್ಯಕವಾಗಿವೆ.

**ಅಣುಭಾಷ್ಯ:-** **'ಸರ್ವೈರಪಿ ಜ್ಞೇಯೋ ವಿಷ್ಣುಃ'**

**ಭಾವಾರ್ಥ:-** ಶ್ರವಣ, ಮನನ, ನಿದಿಧ್ಯಾಸನರೂಪಸಮಸ್ತ ಉಪಾಯಗಳಿಂದ ವಿಷ್ಣುವು ಜ್ಞೇಯನಾಗಿದ್ದಾನೆ.

## ಪ್ರದಾನಾಧಿಕರಣ

### ॥ ಓಂ ಪ್ರದಾನವದೇವ ಹಿ ತದುಕ್ತಮ್ ಓಂ ॥ 3-3-44 ॥

ಪ್ರಸಾದಪೂರ್ವಕಗುರೂಪದೇಶ ಸಹಿತ ಶ್ರವಣ-ಮನನಾದಿಗಳೇ ಫಲದಾಯಕವಾಗುತ್ತವೆ. 'ಆಚಾರ್ಯವಾನ್ ಪುರುಷೋ ವೇದ' ಎಂದು ಪ್ರಮಾಣವಿದೆ.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾತ್'**

ಭಾವಾರ್ಥ:- ಜ್ಞಾನೇ = ಜ್ಞಾನಸಾಧನವಾದ ಶ್ರವಣದಲ್ಲಿ, ವಿಶೇಷಃ ಸ್ಯಾತ್ = ಗುರುಪ್ರಸಾದಪೂರ್ವಕ ಪ್ರದಾನರೂಪ ವಿಶೇಷವು ಅವಶ್ಯಕ.

## ಲಿಂಗಭೂಯಸ್ತ್ವಾಧಿಕರಣ (ಗುರುಪ್ರಸಾದಾಧಿಕರಣ)

### ॥ ಓಂ ಲಿಂಗಭೂಯಸ್ತ್ವಾತ್ ತದ್ಧಿ ಬಲೀಯಸ್ತದಪಿ ಓಂ ॥ 3-3-45 ॥

ಋಷಭಾದಿಗಳಿಂದ ವಿದ್ಯೆಯನ್ನು ಪಡೆದ ಸತ್ಯಕಾಮರು ಪುನಃ ಗುರುಗಳಾದ ಗೌತಮರಿಂದ ವಿದ್ಯೋಪದೇಶವನ್ನು ಬಯಸಿ ಪ್ರಾರ್ಥಿಸುತ್ತಾರೆ:- 'ಆಚಾರ್ಯಾದ್ಧ್ಯೇವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪಯತೀತಿ' ಅದಕ್ಕೆ ಗೌತಮರು 'ಅತ್ರ ನ ಕಿಂಚನ ವೀಯಾಯ' ಇದರಲ್ಲಿ ತಪ್ಪೇನು? ಎಂದು ಅನುಮತಿಸುತ್ತಾರೆ.ಉಪಕೋಸಲರು ಅಗ್ನ್ಯಾದಿದೇವತೆಗಳಿಂದ ವಿದ್ಯೆಯನ್ನು ಹೊಂದಿದ್ದರೂ ಗುರುಗಳಾದ ಸತ್ಯಕಾಮರನ್ನು ಪ್ರಾರ್ಥಿಸುತ್ತಾರೆ. ಅವರು ವಿದ್ಯೋಪದೇಶವನ್ನು ಮಾಡುತ್ತಾರೆ. ಈ ರೀತಿ ಅನೇಕ ಲಿಂಗಗಳಿರುವುದರಿಂದ ಗುರುಪ್ರಸಾದವೇ ಶ್ರವಣಾದಿಗಳಿಗಿಂತ ಬಲಿಷ್ಠವೆಂದು ತಿಳಿಯುತ್ತದೆ. ಆದರೆ ಶ್ರವಣಾದಿಗಳು ವ್ಯರ್ಥವಲ್ಲ, 'ಶ್ರೋತವ್ಯೋ ಮನ್ತವ್ಯಃ..' ಶ್ರವಣಾದಿಗಳನ್ನು ಮಾಡಬೇಕೆಂದು ವಿಧಿವಾಕ್ಯವಿದೆ.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾತ್'**

ಭಾವಾರ್ಥ:- ಜ್ಞಾನೇ = ಜ್ಞಾನ ಉಂಟಾಗಲು, ವಿಶೇಷಃ ಸ್ಯಾತ್ = ಪ್ರಸಾದಪೂರ್ವಕ ಗುರುಪ್ರದಾನಕ್ಕೆ ಪ್ರಾಬಲ್ಯವು ಇದೆ.

## ಪೂರ್ವವಿಕಲ್ಪಾಧಿಕರಣ

### ॥ ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾಮಾನಸವತ್ ಓಂ ॥ 3-3-46 ॥

ಪೂರ್ವಪ್ರಾಪ್ತರಾದ ಗುರುಗಳನ್ನೇ ಸ್ವೀಕರಿಸಬೇಕೆಂಬ ನಿಯಮವಿಲ್ಲ. ಅನಂತರದ ಗುರುಗಳೇ ಹಿಂದಿನವರಗಿಂತ ಉತ್ತಮರಾಗಿ ಸಮಗ್ರ ಅನುಗ್ರಹವನ್ನು ಮಾಡುವುದಾದರೆ ಪೂರ್ವಗುರುಗಳ ಅನುಮತಿ ಇಲ್ಲದೆ ಅನಂತರದ ಗುರುಗಳನ್ನೇ ಸ್ವೀಕರಿಸಬೇಕು. ಅಧಮರನ್ನು ಸ್ವೀಕರಿಸಬಾರದು. ಸಮಗ್ರಾನುಗ್ರಹವನ್ನು ಮಾಡುವ ಗುರುಗಳು ಪೂರ್ವಗುರುಗಳಿಗೆ ಸಮಾನರಾಗಿದ್ದರೆ ಅವರ ಅನುಮತಿಯಿಂದ ಸಂಪೂರ್ಣ ಅನುಗ್ರಹವನ್ನು ಮಾಡುವ ಗುರುಗಳನ್ನು ಸ್ವೀಕರಿಸ ಬಹುದು. ಸಮಾನಫಲವಿರುವ ಧ್ಯಾನಕ್ರಿಯೆಗಳು ಯಾವರೀತಿ ವೈಕಲ್ಪಿಕವೋ ಹಾಗೆಯೇ ಪ್ರಕೃತದಲ್ಲೂ ಸಹ.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್'**

ಭಾವಾರ್ಥ:- ವಿಶೇಷಃ ಸ್ಯಾತ್ = ಪೂರ್ವಪ್ರಾಪ್ತ ಗುರುಗಳಿಗಿಂತ ಅನಂತರ ಗುರುಗಳಲ್ಲಿ ಉತ್ತಮತ್ವರೂಪ ವಿಶೇಷವಿರುವುದಾದರೆ, ಜ್ಞಾನೇ = ಜ್ಞಾನಕ್ಕೋಸ್ಕರ ಉತ್ತರೋತ್ತರಮ್ = ಅನಂತರ ಪ್ರಾಪ್ತಗುರುವನ್ನು ಸ್ವೀಕರಿಸಬೇಕು.

## ವಿದ್ಯಾಧಿಕರಣ

### ॥ ಓಂ ವಿದ್ಯೈವ ತು ನಿರ್ಧಾರಣಾತ್ ಓಂ ॥ 3-3-48 ॥

'ನಾನ್ಯಃ ಪಂಥಾ ವಿದ್ಯತೇಽಯನಾಯ' ಎಂದು ಶ್ರುತಿಪ್ರಮಾಣ ವಿರುವುದರಿಂದ ಮುಕ್ತಿಸಾಧನವಾದದ್ದು ಜ್ಞಾನವೇ, ಕರ್ಮವಲ್ಲ. ಕರ್ಮವನ್ನು ಮುಕ್ತಿಸಾಧನ ಎನ್ನುವ ವಚನಗಳಿಗಿಂತ 'ನಾನ್ಯಃ ಪಂಥಾ.....' ಎಂಬ ಶ್ರುತಿಯು ಪ್ರಬಲ.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾತ್'**

**ಭಾವಾರ್ಥ:-** ಜ್ಞಾನೇ ತು = ಅಪರೋಕ್ಷಜ್ಞಾನವಾದ ನಂತರವೇ, ವಿಶೇಷಃ ಸ್ಯಾತ್ = ಮೋಕ್ಷರೂಪ ವಿಶೇಷವು ಕರ್ಮದಿಂದ ಅಲ್ಲ.

## ಅಬಾಧಾಧಿಕರಣ (ಶ್ರುತ್ಯಾದ್ಯಧಿಕರಣ)

### ॥ ಓಂ ಶ್ರುತ್ಯಾದಿ ಬಲೀಯಸ್ತ್ವಾಚ್ಚ ನ ಬಾಧಃ ಓಂ ॥ 3-3-50 ॥

ಜ್ಞಾನದಿಂದ ಮೋಕ್ಷ ಎನ್ನುವ ವಾಕ್ಯಗಳಿಗೆ ಕರ್ಮದಿಂದ ಮೋಕ್ಷ ಎನ್ನುವ 'ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ' ಎಂಬ ಸ್ಮೃತಿವಾಕ್ಯದಿಂದ ಬಾಧವಿಲ್ಲ. ಜ್ಞಾನವೇ ಮೋಕ್ಷಸಾಧನ ಎಂಬ ವಿಷಯದಲ್ಲಿ ಬಲಿಷ್ಠವಾದ ಶ್ರುತಿಲಿಂಗಾದಿಗಳಿವೆ.

ಇಂದ್ರನು ಬಹುಕರ್ಮಗಳನ್ನು ಮಾಡದಿದ್ದರೂ ತತ್ವಜ್ಞಾನಕ್ಕಾಗಿ ಪ್ರಾರ್ಥನೆ ಮಾಡಿದ್ದಾನೆ. 'ನಾಸ್ತ್ಯಕೃತಃ ಕೃತೇನ' ಅನಿತ್ಯವಾದ ಕರ್ಮದಿಂದ ನಿತ್ಯಪುರುಷಾರ್ಥವು ಆಗುವುದಿಲ್ಲ ಎನ್ನುವ ನಿರವಕಾಶ ಉಪಪತ್ತಿ ಇದೆ. ಆದ್ದರಿಂದ ಜ್ಞಾನದಿಂದ ಸಾಧ್ಯವಾದದ್ದು ಮೋಕ್ಷ.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾತ್'**

**ಭಾವಾರ್ಥ:-** ಜ್ಞಾನೇ = ಜ್ಞಾನವು ಮೋಕ್ಷಸಾಧನ ಎಂಬ ವಿಷಯದಲ್ಲಿ, ವಿಶೇಷಃ=ಬಲಿಷ್ಠವಾದ ಶ್ರುತ್ಯಾದಿ ಪ್ರಮಾಣರೂಪ ವಿಶೇಷವಿದೆ. ಕರ್ಮವಿಷಯ ದಲ್ಲಿ ವಿಶೇಷವಿಲ್ಲ.

## ಅನುಬಂಧಾದ್ಯಧಿಕರಣ

### ॥ ಓಂ ಅನುಬಂಧಾದಿಭ್ಯಃ ಓಂ ॥ 3-3-51 ॥

ಕೇವಲ ಗುರುಪ್ರಸಾದ ಪೂರ್ವಕ ಶ್ರವಣಾದಿಗಳಿಂದಲೇ ಅಪರೋಕ್ಷಜ್ಞಾನ ವಲ್ಲ. ಹರಿಗುರುಭಕ್ತಿ ಹಾಗು ಶಮಾದಿಗಳೂ ಅಗತ್ಯ.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾತ್'**

**ಭಾವಾರ್ಥ:-** ಗುರುಪ್ರಸಾದಾದಿಗಳು ಮಾತ್ರ ಅಪರೋಕ್ಷಜ್ಞಾನಕ್ಕೆ ಅಪೇಕ್ಷಿತವಲ್ಲ. ಹರಿಭಕ್ತ್ಯಾದಿರೂಪ ವಿಶೇಷದ ಅಪೇಕ್ಷೆಯೂ ಇದೆ.

## ದರ್ಶನಭೇದಾಧಿಕರಣ (ಪ್ರಜ್ಞಾಂತರಾಧಿಕರಣ)

### ॥ ಓಂ ಪ್ರಜ್ಞಾಂತರ ಪೃಥಕ್ತ್ವವದ್ ದೃಷ್ಟಿಶ್ಚ ತದುಕ್ತಮ್ ಓಂ ॥ 3-3-52 ॥

ಭಗವಂತನ ದರ್ಶನ ಏಕಪ್ರಕಾರವಾದದ್ದಲ್ಲ. ಅವಿಚ್ಛಿನ್ನ ಪರೋಕ್ಷಜ್ಞಾನ ಸಂತಾನರೂಪವಾದ ಧ್ಯಾನವು ಅನೇಕಪ್ರಕಾರ. ಅದರಂತೆ ಭಗವಂತನ ಅಪರೋಕ್ಷ ಜ್ಞಾನವು ಅನೇಕವಿಧ. ಸಾಧನಾನುಸಾರಿಯಾದದ್ದು ಫಲ. 'ಅಂತರ್ದೃಷ್ಟಯೋ ಬಹಿರ್ದೃಷ್ಟಯೋಽವತಾರದೃಷ್ಟಯಃ' ಮುಂತಾದ ಶ್ರುತಿಗಳು ಅಪರೋಕ್ಷ ದರ್ಶನದ ತಾರತಮ್ಯವನ್ನು ಹೇಳಿದೆ.

**ಅಣುಭಾಷ್ಯ:-** 'ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್'

**ಭಾವಾರ್ಥ:-** ಉತ್ತರೋತ್ತರಮ್ = ಮನುಷ್ಯೋತ್ತಮರಿಂದಾರಂಭಿಸಿ ಬ್ರಹ್ಮಪರ್ಯಂತವಾಗಿ, ಜ್ಞಾನೇ = ಅಪರೋಕ್ಷಜ್ಞಾನದಲ್ಲಿ, ವಿಶೇಷಃ ಸ್ಯಾತ್ = ಅಂತರ್ದೃಷ್ಟಿತ್ವ, ಬಹಿರ್ದೃಷ್ಟಿತ್ವರೂಪವಿಶೇಷವಿದೆ.

## ನ ಸಾಮಾನ್ಯಾಧಿಕರಣ

### ॥ ಓಂ ನ ಸಾಮಾನ್ಯಾದಪ್ಯುಪಲಬ್ಧೇಃ ಮೃತ್ಯುವನ್ನ ಹಿ ಲೋಕಾಪತ್ತಿಃ ಓಂ ॥ 3-3-53 ॥

ಭಗವಂತನ ಎಲ್ಲ ರೂಪಗಳಲ್ಲಿ ಅಭೇದವಿದ್ದರೂ ಯಾವುದಾದರೂ ಒಂದು ರೂಪದರ್ಶನವು ಮೋಕ್ಷಸಾಧನವಲ್ಲ. ಬಿಂಬದರ್ಶನದಿಂದಲೇ ಮೋಕ್ಷ. ಮರಣಸಾಮಾನ್ಯದಿಂದ ಮುಕ್ತಿಯಾಗಲಾರದು. ಮರಣವಿಶೇಷದಿಂದಲೇ ಮುಕ್ತಿ ಅದರಂತೆ, 'ಸಮೋಽಪಿ ಭಗವಾನ್ ಬಿಂಬದರ್ಶನ ಏವೈನಂ ಮೋಚಯತಿ' ಎಂದು ಶ್ರುತಿ ಇದೆ. ಇತರ ರೂಪಗಳ ದರ್ಶನವು ವ್ಯರ್ಥವಲ್ಲ. ಅದರಿಂದ ಮಹರಾದಿ ಲೋಕಗಳ ಪ್ರಾಪ್ತಿಯಾಗುವುದು. ಅದೇ ಮುಕ್ತಿಯಲ್ಲ.

**ಅಣುಭಾಷ್ಯ:-** 'ವಿಶೇಷಸ್ತು ಜ್ಞಾನೇ ಸ್ಯಾತ್'

**ಭಾವಾರ್ಥ:-** ಜ್ಞಾನೇ = ಮೋಕ್ಷಸಾಧನ ಅಪರೋಕ್ಷಜ್ಞಾನದಲ್ಲಿ, ವಿಶೇಷಃ ಸ್ಯಾತ್ = ಬಿಂಬವಿಷಯಕತ್ವರೂಪ ವಿಶೇಷವಿದೆ.

## ತಾದ್ವಿದ್ಯಾಧಿಕರಣ

### ॥ ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ ॥ 3-3-54 ॥

'ಏತೈರುಪಾಯೈಃ ಯತತೇ ಯಸ್ತು ವಿದ್ವಾನ್ ತಸ್ಯೈ ಷ ಆತ್ಮಾ ವಿಶತೇ ಬ್ರಹ್ಮ ಧಾಮ' ಎಂದು ಶ್ರುತಿ ಇರುವುದರಿಂದ ಭಕ್ತಿಯಿಂದ ಪ್ರಸನ್ನನಾದ ಭಗವಂತನಿಂದಲೇ ಅಪರೋಕ್ಷಜ್ಞಾನವು 'ಭಕ್ತಿರೇವೈನಂ ನಯತಿ ಭಕ್ತಿರೇವೈನಂ ದರ್ಶಯತಿ' ಎಂಬ ಶ್ರುತಿಯ ವಿರೋಧವಿಲ್ಲ. ಸಾಧನಗಳಲ್ಲಿ ಭಕ್ತಿಯು ಪ್ರಧಾನವೆಂದು ಅಭಿಪ್ರಾಯದಿಂದ ಆ ಶ್ರುತಿಗಳು ಪ್ರವೃತ್ತವಾಗಿವೆ.

**ಅಣುಭಾಷ್ಯ:-** 'ವಿಶೇಷಸ್ತು ಜ್ಞಾನೇ ಸ್ಯಾತ್'

**ಭಾವಾರ್ಥ:-** ಶ್ರವಣಮನನಾದಿಗಳಿಂದ ಪ್ರಸನ್ನನಾದ ವಿಷ್ಣುವೇ ಜ್ಞಾನೇ = ಅಪರೋಕ್ಷಜ್ಞಾನಕ್ಕಾಗಿ, ಸ್ಯಾತ್ = ಸಾಧನನಾಗಿರುವನು. ಭಕ್ತಿಯೇ ಸಾಧನವೆನ್ನುವ ಶ್ರುತಿ ಹೇಗೆ ಉಪಪನ್ನವೆಂದರೆ, ವಿಶೇಷಸ್ತು ಸ್ಯಾತ್ = ಸಾಧನಗಳಲ್ಲಿ ಭಕ್ತಿಗೆ ಪ್ರಧಾನತ್ವರೂಪ ವಿಶೇಷವಿರುವುದು.

## ಏಕಾಧಿಕರಣ

### ॥ ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ ॥ 3-3-55 ॥

ಎಲ್ಲರಿಗೂ ಉಪಾಸನಾದಿಗಳಲ್ಲಿ ಅನಾದಿಯೋಗ್ಯತೆಯ ಅಪೇಕ್ಷೆ ಇದೆ. ಅರ್ಜುನಾದಿಗಳಿಗೆ ಉತ್ಪತ್ತಿ ಇರುವುದರಿಂದ ಅವರ ಯೋಗ್ಯತೆಯು ಅನಾದಿಯಲ್ಲ ಎನ್ನಬಾರದು. ಅರ್ಜುನಾದಿಗಳಲ್ಲಿ ಅಂಶಾಂಶಿಗಳು ಅಭಿನ್ನವಾಗಿವೆ. ಆದಕಾರಣ ಅಂಶಿ-ಅಂಶಗಳ ಯೋಗ್ಯತೆಯು ಭಿನ್ನವಲ್ಲ. ಈಶ್ವರನ ಅಚಿಂತ್ಯಶಕ್ತಿಯಿಂದ

ಅಂಶಿಯಲ್ಲಿರುವ ಎಲ್ಲದರ ಅನುಸಂಧಾನವು ಅಂಶಕ್ಕೆ ಇಲ್ಲದಿದ್ದರೂ ಅಂಶದಲ್ಲಿರುವ ಜ್ಞಾನಾದಿಗಳಿಗೆ ಅನುಸಂಧಾನವು ಅಂಶಿಗೆ ಇರುವುದರಿಂದ ಅವರಿಬ್ಬರಿಗೂ ಅಭೇದವೇ ಸಿದ್ಧವಾಗುತ್ತದೆ.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾತ್'**

ಭಾವಾರ್ಥ:- ಜ್ಞಾನೇ = ಜ್ಞಾನಸಾಧನವಾದ ಉಪಾಸನಾದಲ್ಲಿ, ವಿಶೇಷಃ ಸ್ಯಾತ್ = ಅನಾದಿಯೋಗ್ಯತಾಸಾಪೇಕ್ಷರೂಪ ವಿಶೇಷವಿದೆ.

## ಅಂಗಾವಬದ್ಧಾಧಿಕರಣ

**॥ ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್ ಓಂ ॥ 3-3-57 ॥**

ಭಗವಂತನ ಅಂಗಗಳನ್ನು ಆಶ್ರಯಿಸಿರುವ ಬ್ರಹ್ಮಾದಿದೇವತೆಗಳನ್ನು ಉಪಾಸಿಸಬೇಕು. ವೇದಗಳಲ್ಲಿ ಆ ದೇವತೆಗಳನ್ನು ಪ್ರತಿಪಾದಿಸಿರುವುದಕ್ಕೆ ಬೇರೆ ಪ್ರಯೋಜನವಿಲ್ಲ. ವೇದದ ಬೇರೆಬೇರೆ ಶಾಖೆಗಳಲ್ಲಿ ಬ್ರಹ್ಮಾದಿಗಳಿಗೆ ಹೇಳಿದ ಗುಣಗಳನ್ನು ರುದ್ರಾದಿಗಳಲ್ಲಿ ಉಪಸಂಹಾರ ಮಾಡಬಾರದು. ಉತ್ತಮರ ಎಲ್ಲ ಗುಣಗಳೂ ಅಧಮರಲ್ಲಿ ಇರುವುದಿಲ್ಲ. ಅಧಮರಗುಣಗಳನ್ನು ಉತ್ತಮರಲ್ಲಿ ಉಪಸಂಹಾರ ಮಾಡಿದರೆ ವಿರೋಧವಿಲ್ಲ. ಇದು ಶ್ರುತಿಸ್ಮೃತಿಗಳಿಂದ ಸಿದ್ಧವಾಗಿದೆ.

**ಅಣುಭಾಷ್ಯ:- 'ಸುರೇಶ್ವರೈರುಪಾಸ್ಯೋ ವಿಷ್ಣುಃ'**

ಭಾವಾರ್ಥ:- ದೇವತೆಗಳು ಭಗವಂತನ ಅಂಗವನ್ನು ಆಶ್ರಯಿಸಿದ್ದಾರೆಂದೇ ಉಪಾಸಿಸಬೇಕು.

## ಭೂಮಾಧಿಕರಣ

**॥ ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ ॥ 3-3-59 ॥**

ಸರ್ವಗುಣಗಳಲ್ಲಿ ಶ್ರೇಷ್ಠವಾದುದು ಭೂಮಗುಣ. ಆದ್ದರಿಂದ ಈ ಗುಣವು

ಎಲ್ಲರಿಂದಲೂ ಉಪಾಸ್ಯವಾಗಿದೆ. ಭೂಮವೆಂದರೆ ಪೂರ್ಣತೆ. ಇದು ಎಲ್ಲಗುಣಗಳಲ್ಲೂ ಅನುಸ್ಯೂತವಾಗಿದೆ. ದೀಕ್ಷಾ, ಪ್ರಾಯಣೀಯ, ಉದಯನೀಯ ಎಂದು ಮೂರು ಸವನಗಳಿಂದ ಕೂಡಿದ ಕ್ರತುವು ಸರ್ವಯಾಗದಲ್ಲೂ ಅನುವೃತ್ತವಾದಾಗಲೇ ಯಾಗವು ಸಫಲ. ಆದ್ದರಿಂದಲೇ ಅವುಗಳಿಗೆ ಶ್ರೇಷ್ಠತೆ. ಅದರಂತೆ ಈ ಪೂರ್ಣತೆಯನ್ನು ಇತರ ಆನಂದಾದಿಗುಣಗಳ ಸಹಭಾವದಿಂದ ಉಪಾಸನೆ ಮಾಡಿದಾಗ ಇಷ್ಟಫಲ ಸಿದ್ಧಿಯಾಗುತ್ತದೆ.

**ಅಣುಭಾಷ್ಯ:- 'ಸರ್ವೈರುಪಾಸ್ಯಃ ವಿಶೇಷಸ್ತು ಸ್ಯಾತ್'**

**ಭಾವಾರ್ಥ:-** ಭೂಮ = ಪೂರ್ಣತೆ ಎಂಬ ಗುಣವು ಎಲ್ಲರಿಂದಲೂ ಉಪಾಸ್ಯವಾಗಿದೆ. ಸರ್ವಗುಣಗಳಲ್ಲಿ ಭೂಮಗುಣಕ್ಕೆ ಶ್ರೇಷ್ಠತ್ವರೂಪವಿಶೇಷವಿದೆ.

## ನಾನಾಶಬ್ದಾಧಿಕರಣ

### ॥ ಓಂ ನಾನಾಶಬ್ದಾದಿಭೇದಾತ್ ಓಂ ॥ 3-3-60 ॥

ಸಾಧಕರಿಗೆ ಪೂರ್ಣತೆಯು ಏಕಪ್ರಕಾರವಾಗಿ ಪ್ರತೀತವಾಗುವುದಿಲ್ಲ. ಶಬ್ದಾದಿ ಪ್ರಮಾಣಗಳಿಂದ ಪೂರ್ಣತೆಯ ಜ್ಞಾನವನ್ನು ಪಡೆಯಬೇಕು. ಈ ಪ್ರಮಾಣಗಳು ಅಧಿಕಾರಿಗಳ ಯೋಗ್ಯತೆಗನುಗುಣವಾಗಿ ಅನೇಕ ಪ್ರಕಾರವಾಗಿ ಜ್ಞಾನವನ್ನು ನೀಡುತ್ತವೆ. ಆದ್ದರಿಂದ ಭೂಮಗುಣವು ನಾನಾಪ್ರಕಾರವಾಗಿ ಉಪಾಸ್ಯವಾಗಿದೆ.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್'**

ಭಾವಾರ್ಥ:- ಸಾಧಕರಿಗೆ ಉತ್ತರೋತ್ತರಭೂಮತ್ವದ ಪ್ರತೀತಿಯಲ್ಲಿ ವಿಶೇಷಃ=ತಾರತಮ್ಯವಿದೆ.

## ವಿಕಲ್ಪಾಧಿಕರಣ

### ॥ ಓಂ ವಿಕಲ್ಪೋ ವಿಶಿಷ್ಟಫಲತ್ವಾತ್ ಓಂ ॥ 3-3-61 ॥

ಬಿಂಬರೂಪವಲ್ಲದ ನೃಸಿಂಹಾದಿರೂಪಗಳ ಉಪಾಸನೆಯನ್ನು ಮಾಡಲೇ ಬೇಕೆಂಬ ನಿಯಮವಿಲ್ಲ. ದುರಿತನಿವೃತ್ತಿರೂಪ ವಿಶೇಷಫಲವನ್ನು ಅಪೇಕ್ಷಿಸುವವರು

ಮಾಡಬೇಕು. ಅಪೇಕ್ಷೆ ಇಲ್ಲದವನು ಮಾಡಬೇಕಿಲ್ಲ. ಆದ್ದರಿಂದ ಇತರರೂಪಗಳ ಉಪಾಸನೆಯು ವಿಕಲ್ಪ.

**ಅಣುಭಾಷ್ಯ:-** 'ವಿಶೇಷಸ್ತು ಜ್ಞಾನೇ ಸ್ಯಾತ್'

**ಭಾವಾರ್ಥ:-** ಜ್ಞಾನೇ = ನೃಸಿಂಹಾದಿರೂಪಗಳ ಉಪಾಸನೆಯಲ್ಲಿ, ವಿಶೇಷಃ ಸ್ಯಾತ್=ವಿಕಲ್ಪವು ಅಂದರೆ ಅನೇಕ ಪ್ರಕಾರವಿದೆ. ದುರಿತನಿವೃತ್ತಿಯ ಅಪೇಕ್ಷೆಯಿಂದ ಮಾಡಬಹುದು. ತೀವ್ರವಾದ ಬಿಂಬೋಪಾಸನೆಯಿಂದಲೇ ದುರಿತ ನಿವೃತ್ತಿಯಾಗುವುದಾದರೆ ನೃಸಿಂಹಾದಿರೂಪಗಳ ಉಪಾಸನೆಯನ್ನು ಮಾಡದಿರಬಹುದು.

## ಕಾಮ್ಯಾಧಿಕರಣ

### ॥ ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ ನ ವಾ ಪೂರ್ವಹೇತ್ವಭಾವಾತ್ ಓಂ ॥ 3-3-62 ॥

ಮೋಕ್ಷವನ್ನೇ ಬಯಸುವ ಸಾಧಕನಿಗೆ ಧನಕನಕಾದಿಗಳ ಅಪೇಕ್ಷೆ ಇರುವುದಿಲ್ಲ. ಆದ್ದರಿಂದ ಆ ಫಲಕ್ಕೆ ಕಾರಣವಾದ ಶ್ರೀಕರಾದಿರೂಪ-ಗುಣಗಳ ಉಪಸಂಹಾರವನ್ನು ಮಾಡಬಾರದು. ಆದರೆ ಕೇವಲ ಭಗವಂತನ ಪ್ರಸಾದದ ಉದ್ದೇಶದಿಂದ ಮಾಡಬಹುದು. ಧನಕನಕಾದಿಗಳ ಅಪೇಕ್ಷೆ ಇರುವವರು ಆ ರೂಪಗುಣಗಳ ಉಪಸಂಹಾರವನ್ನು ಮಾಡಬೇಕು.

**ಅಣುಭಾಷ್ಯ:-** 'ವಿಶೇಷಸ್ತು ಜ್ಞಾನೇ ಸ್ಯಾತ್'

**ಭಾವಾರ್ಥ:-** ಜ್ಞಾನೇ = ಇಷ್ಟಸಾಧನವಾದ ಭಗವದ್‌ರೂಪದ ಉಪಾಸನಾದಲ್ಲಿ, ವಿಶೇಷಃ = ವಿಕಲ್ಪವು ಧನಕನಕಾದಿಗಳ ಅಪೇಕ್ಷೆ ಇರುವವರು ಮಾಡಬಹುದು. ಮುಮುಕ್ಷುಗಳು ಆ ಉಪಾಸನೆಯನ್ನು ಈಶ್ವರಪ್ರಸಾದದ ಉದ್ದೇಶದಿಂದ ಮಾಡಬಹುದು. ಐಹಿಕಫಲಕ್ಕಾಗಿ ಮಾಡಬಾರದು.

## ಯಥಾಶ್ರಯಭಾವಾಧಿಕರಣ

### ॥ ಓಂ ಅಂಗೇಷು ಯಥಾಶ್ರಯಭಾವಃ ಓಂ ॥ 3-3-63 ॥

'ಚಕ್ಷೋಃ ಸೂರ್ಯೋಽಜಾಯತ' ಮುಂತಾದ ಶ್ರುತಿಗಳಲ್ಲಿ ದೇವತೆಗಳು ಪರಮಾತ್ಮನ ಅಂಗಗಳಿಂದ ಜನಿಸಿ ಆಯಾಯಾ ಅಂಗಗಳನ್ನೇ ಆಶ್ರಯಿಸಿದ್ದಾರೆಂದು ಹೇಳಲಾಗಿದೆ. ಆದ್ದರಿಂದ ಅಂಗಾಶ್ರಿತತ್ವದ ಉಪಾಸನೆಗೆ ದೇವತೆಗಳು ಅಧಿಕಾರಿಗಳು.

**ಅಣುಭಾಷ್ಯ:- 'ಸುರೇಶ್ವರೈರುಪಾಸ್ಯೋ ವಿಷ್ಣುಃ'**

**ಭಾವಾರ್ಥ:-** ಭಗವಂತನ ಅಂಗವನ್ನು ದೇವತೆಗಳು ಆಶ್ರಯಿಸಿದ್ದಾರೆಂದು ದೇವತೆಗಳಿಂದ ವಿಷ್ಣುವು ಉಪಾಸ್ಯನಾಗಿದ್ದಾನೆ.

## ನವಾಧಿಕರಣ

### ॥ ಓಂ ನ ವಾ ಅತತ್‌ಸಹಭಾವಶ್ರುತೇಃ ಓಂ ॥ 3-3-67 ॥

ಎಲ್ಲ ಶಾಖೆಗಳಲ್ಲೂ ಹೇಳಿದ ಉಪಾಸ್ಯಗಳಾದ ಇತರಗುಣಗಳೊಂದಿಗೆ 'ಸೂರ್ಯನಿಗೆ ಆಶ್ರಯವಾದ ನೇತ್ರವುಳ್ಳವನು ವಿಷ್ಣು' ಇವೇ ಮುಂತಾದ ಉಪಾಸನೆಯನ್ನು ಹೇಳಿಲ್ಲ. ಆದ್ದರಿಂದ ಎಲ್ಲರಿಗೂ ಅಂಗಾಶ್ರಿತತ್ವದ ಉಪಾಸನಾಧಿಕಾರವಿಲ್ಲ. ದೇವತೆಗಳು ಮಾತ್ರ ಅಧಿಕಾರಿಗಳು.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾತ್'**

**ಭಾವಾರ್ಥ:-** ಅಂಗಾಶ್ರಿತತ್ವದ ಉಪಾಸನೆಯಲ್ಲಿ ದೇವತೆಗಳಿಂದ ಕರ್ತವ್ಯತ್ವ ದೇವೇತರರಿಂದ ಅಕರ್ತವ್ಯತ್ವರೂಪ ವಿಶೇಷವಿದೆ.

## ಚತುರ್ಥಪಾದ

**ಸರ್ವೇಽಪಿ ಪುರುಷಾರ್ಥಾಃ ಸ್ಯುಃ ಜ್ಞಾನಾದೇವ ನ ಸಂಶಯಃ ।**
**ನ ಲಿಪ್ಯತೇ ಜ್ಞಾನವಾಂಶ್ಚ ಸರ್ವದೋಷೈರಪಿ ಕ್ವಚಿತ್ ॥**

ನಾಲ್ಕುವಿಧವಾದ ಪುರುಷಾರ್ಥಗಳೂ ವಿಷ್ಣುವಿನ ಅಪರೋಕ್ಷಜ್ಞಾನದಿಂದಲೇ ಸಿದ್ಧಿಸುತ್ತದೆ. ಈ ವಿಷಯದಲ್ಲಿ ಸಂಶಯ ಪಡಬಾರದು. ಅಪರೋಕ್ಷಜ್ಞಾನಿಗಳಿಗೆ ಜ್ಞಾನೋತ್ತರ ಕರ್ಮಗಳ ಲೇಪವಿಲ್ಲ.

**ಗುಣದೋಷೈಃ ಸುಖಸ್ಯಾಪಿ ವೃದ್ಧಿಹ್ರಾಸೌ ವಿಮುಕ್ತಿಗೌ ।**
**ನೃಣಾಂ ಸುರಾಣಾಂ ಮುಕ್ತೌ ತು ಸುಖಂ ಕ್ಲೃಪ್ತಂ ಯಥಾಕ್ರಮಮ್ ॥**

ಅಪರೋಕ್ಷಜ್ಞಾನಿಗಳಾದ ಮನುಷ್ಯರ ಗುಣದೋಷಗಳಿಂದ ಮುಕ್ತಿಯಲ್ಲಿ ಆನಂದದ ವೃದ್ಧಿಹ್ರಾಸಗಳಾಗುವುದು. ಆದರೆ ಅಪರೋಕ್ಷಜ್ಞಾನಿಗಳಾದ ದೇವತೆಗಳಿಗೆ ಅವರವರ ಯೋಗ್ಯತಾನುಸಾರ ಮುಕ್ತಿಯಲ್ಲಿ ಆನಂದವು ನಿಯತವಾಗಿರುತ್ತದೆ.

ಉಪಾಸನಾದಿಂದ ಸಾಧ್ಯವಾದ ಜ್ಞಾನದ ಮಹತ್ವವನ್ನು ಈ ಪಾದದಲ್ಲಿ ಹೇಳುತ್ತಿದ್ದಾರೆ.

## ಪುರುಷಾರ್ಥಾಧಿಕರಣ

**॥ ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ ॥3-4-1॥**

ಅಪರೋಕ್ಷಜ್ಞಾನದಿಂದಲೇ ಸರ್ವವಿಧ ಪುರುಷಾರ್ಥಗಳೂ ಸಿದ್ಧಿಸುತ್ತವೆ. ಕೇವಲ ಮೋಕ್ಷವಲ್ಲ. 'ಜ್ಞಾನಾದೇವ ಸ್ವರ್ಗಃ ಜ್ಞಾನಾದೇವ ಮೋಕ್ಷಃ ಜ್ಞಾನಾದೇವ ಸರ್ವೇ ಕಾಮಾಃ ಸಂಪದ್ಯಂತೇ' ಇವೇ ಮುಂತಾದ ಶ್ರುತಿಗಳು ಈ ವಿಷಯದಲ್ಲಿ ಪ್ರಮಾಣವಾಗಿವೆ.

**ಅಣುಭಾಷ್ಯ:- 'ಸರ್ವೇಽಪಿ ಪುರುಷಾರ್ಥಾಃ ಸ್ಯುಃ ಜ್ಞಾನಾದೇವ ನ ಸಂಶಯಃ'**

**ಭಾವಾರ್ಥ:-** 'ವಿದ್ಯೈವ ತು ನಿರ್ಧಾರಣಾತ್' ಎಂಬ ಸೂತ್ರದಲ್ಲಿ ಹೇಳಿದಂತೆ ಜ್ಞಾನದಿಂದ ಮೋಕ್ಷಮಾತ್ರವಲ್ಲ, ಎಲ್ಲ ಪುರುಷಾರ್ಥಗಳೂ ಜ್ಞಾನದಿಂದ ದೊರೆಯುತ್ತವೆ.

'ಸರ್ವೇಽಪಿ' ಎಂಬಲ್ಲಿರುವ ಅಪಿ ಶಬ್ದದಿಂದ ಜೈಮಿನ್ಯಾದಿಮತದಲ್ಲಿರುವ ವಿಶೇಷವನ್ನು ಸೂಚಿಸಿದ್ದಾರೆ. ಜ್ಞಾನದಿಂದಲೇ ಮೋಕ್ಷ. ಮಧ್ಯದಲ್ಲಿ ಪ್ರಸಾದದ ಅಗತ್ಯವಿಲ್ಲ. ಸ್ವರ್ಗಾದಿಪುರುಷಾರ್ಥಗಳು ಕರ್ಮದ್ವಾರಾ ಉಂಟಾಗುತ್ತವೆ, ಹೀಗೆಂದು ಜೈಮಿನ್ಯಾದಿಗಳ ಮತವಿಶೇಷಗಳು. ಕರ್ಮದಮೂಲಕ ಮೋಕ್ಷವು

ದೊರೆಯಬಹುದು ಎಂದು ಸಂಶಯಪಡಬಾರದು. ಈ ಉದ್ದೇಶದಿಂದ 'ನ ಸಂಶಯಃ' ಎಂದಿದ್ದಾರೆ.

## ಅಸಾರ್ವತ್ರಿಕೀ-ಅಧಿಕರಣ

### ॥ ಓಂ ಅಸಾರ್ವತ್ರಿಕೀ ಓಂ ॥ 3-4-10 ॥

ಶ್ರವಣಾದಿ ಸಾಮರ್ಥ್ಯ, ಜ್ಞಾನಫಲವಾದ ಮೋಕ್ಷದಲ್ಲಿ ಅರ್ಥಿತಾ(ಅಪೇಕ್ಷೆ) ಇವೆಲ್ಲವೂ ಇದ್ದರೂ ಜ್ಞಾನಾಧಿಕಾರವು ಎಲ್ಲರಿಗೂ ಇಲ್ಲ. ಒಂಭತ್ತು ಕೋಟಿ ದೇವತೆಗಳಲ್ಲಿ ದೇವತ್ವವು ಸಮಾನವಾಗಿದ್ದರೂ ಸೋಮಾಧಿಕಾರವು ಎಲ್ಲರಿಗೂ ಇಲ್ಲ. ಭಗವಂತನಲ್ಲಿ ಗುರುಗಳಲ್ಲಿ ಭಕ್ತಿ ಅಧ್ಯಯನಾದಿಗಳು ಇರುವವರಿಗೆ ಮಾತ್ರ ಜ್ಞಾನಾಧಿಕಾರ.

**ಅಣುಭಾಷ್ಯ:- 'ಜ್ಞಾನೇ ವಿಶೇಷಃ ಸ್ಯಾತ್'**

**ಭಾವಾರ್ಥ:-** ಅಪರೋಕ್ಷಜ್ಞಾನದಲ್ಲಿ ಸರ್ವರೂ ಅಧಿಕಾರಿಗಳಲ್ಲ ಎಂಬ ವಿಶೇಷವಿದೆ.

## ಅಧಿಕಾರವಿಶೇಷಾಧಿಕರಣ

### ॥ ಓಂ ನ ವಾ ವಿಶೇಷಾತ್ ಓಂ ॥ 3-4-13 ॥

ಎಲ್ಲ ದೇವತೆಗಳಿಗೂ ಜ್ಞಾನಾಧಿಕಾರದಲ್ಲಿ ಸಮಾನತೆ ಇಲ್ಲ. ಅಧಿಕಾರದಲ್ಲಿ ಸಮಾನತೆ ಇದ್ದರೆ ಜ್ಞಾನದಲ್ಲೂ ಸಾಮ್ಯ ಉಂಟಾಗಬೇಕಾದೀತು. ಅಧಿಕಾರ ತಾರತಮ್ಯವಿಲ್ಲವಾದರೆ ಪ್ರಯತ್ನ ತಾರತಮ್ಯವೂ ಯುಕ್ತವಾಗುವುದಿಲ್ಲ. ಆದ್ದರಿಂದ ಪ್ರಯತ್ನತಾರತಮ್ಯದಿಂದ ಜ್ಞಾನತಾರತಮ್ಯ ಎಂದು ಹೇಳಲು ಸಾಧ್ಯವಿಲ್ಲ.

**ಅಣುಭಾಷ್ಯ:- 'ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್'**

**ಭಾವಾರ್ಥ:-** ಜ್ಞಾನೇ = ಅಪರೋಕ್ಷಜ್ಞಾನದಲ್ಲಿ, ಉತ್ತರೋತ್ತರಂ = ತಾರತಮ್ಯವಿದೆ. ಆದ್ದರಿಂದ ಜ್ಞಾನಾಧಿಕಾರದಲ್ಲೂ, ವಿಶೇಷಃ = ತಾರತಮ್ಯವಿದೆ.

## ಕಾಮಾಚಾರಾಧಿಕರಣ

### ॥ ಓಂ ಸ್ತುತಯೇಽನುಮತಿರ್ವಾ ಓಂ ॥ 3-4-14 ॥

'ಸ ಬ್ರಾಹ್ಮಣಃ ಕೇನ ಸ್ಯಾತ್ ಯೇನ ಸ್ಯಾತ್ ತೇನ ಈದೃಶ ಏವ' ಎಂಬ ಶ್ರುತಿಯಲ್ಲಿ ಜ್ಞಾನಿಗೆ ಸ್ವೇಚ್ಛಾಚರಣೆಯನ್ನು ವಿಧಾನಮಾಡಿಲ್ಲ. ಜ್ಞಾನಿಯು ಸತ್ಕರ್ಮ ಅಥವಾ ಅಸತ್ಕರ್ಮವನ್ನಾಚರಿಸಿದರೂ ಅವನಿಗೆ ಮುಕ್ತಿಯು ನಿಶ್ಚಿತ ಎಂದು ಅವನ ಸ್ತೋತ್ರವನ್ನು ಮಾಡುತ್ತಿದೆ. ಅಥವಾ ಜ್ಞಾನಿಯ ಆಚರಣೆಗೆ ಅನುಮತಿಯನ್ನು ಶ್ರುತಿಯು ನೀಡುತ್ತಿದೆ.

**ಅಣುಭಾಷ್ಯ:- 'ನ ಲಿಪ್ಯತೇ ಜ್ಞಾನವಾಂಶ್ಚ ಸರ್ವದೋಷೈರಪಿ ಕ್ವಚಿತ್'**

**ಭಾವಾರ್ಥ:-** ಅಪರೋಕ್ಷಜ್ಞಾನಿಯು ಜ್ಞಾನೋತ್ತರದಲ್ಲಿ ಮಾಡಿದ ಪಾಪಗಳಿಂದ, ಪುಣ್ಯಗಳಿಂದಲೂ ಸಹ, ಕ್ವಚಿದಪಿ = ಮುಕ್ತಿಯ ಪೂರ್ವದಲ್ಲಿ ಅಥವಾ ಅನಂತರದಲ್ಲಾಗಲೀ, ನ ಲಿಪ್ಯತೇ = ಲೇಪವನ್ನು ಹೊಂದುವುದಿಲ್ಲ. ಅದಕ್ಕೆ ಅಪವಾದವನ್ನು 'ಗುಣದೋಷೈಃ ಸುಖಸ್ಯಾಪಿ ವೃದ್ಧಿಹ್ರಾಸೌ ವಿಮುಕ್ತಿಗೌ' ಎಂಬ ವಾಕ್ಯದಿಂದ ಹೇಳಿದ್ದಾರೆ. ಜ್ಞಾನೋತ್ತರಕೃತವಾದ ಮಹಾಪುಣ್ಯಪಾಪಗಳಿಂದ ಮೋಕ್ಷದಲ್ಲಿ ಸುಖ ಮತ್ತು ಜ್ಞಾನದ ವೃದ್ಧಿಹ್ರಾಸಗಳು ಆಗುತ್ತದೆ.

## ಉಭಯಲಿಂಗಾಧಿಕರಣ

### ॥ ಓಂ ಸರ್ವಥಾಽಪಿ ತು ತ ಏವೋಭಯಲಿಂಗಾತ್ ಓಂ ॥ 3-4-34 ॥

ದೇಶ, ಕಾಲ, ಗುರೂಪಸತ್ತಿ, ಶ್ರವಣಾದಿ ಅನೇಕ ರೀತಿಯ ಉತ್ಸಾಹವಿದ್ದರೂ ಜ್ಞಾನಯೋಗ್ಯರೇ ಜ್ಞಾನವನ್ನು ಪಡೆಯುವರು. ಪ್ರಜಾಪತಿಯು ಇಂದ್ರ-ವಿರೋಚನರಿಬ್ಬರಿಗೂ ಉಪದೇಶಿಸಿದರೂ ಯೋಗ್ಯನಾದ ಇಂದ್ರನಿಗೆ ಜ್ಞಾನಪ್ರಾಪ್ತಿ. ಅಯೋಗ್ಯನಾದ ವಿರೋಚನನಿಗೆ ಯಥಾರ್ಥಜ್ಞಾನ ದೊರೆಯಲಿಲ್ಲ.

## ಆಧಿಕಾರಿಕಾಧಿಕರಣ

### ॥ ನ ಚಾಧಿಕಾರಿಕಮಪಿ ಪತನಾನುಮಾನಾತ್ ತದಯೋಗಾತ್ ಓಂ ॥ 3-4-41 ॥

ತನ್ನಿಂದ ಹತ್ತಲು ಯೋಗ್ಯವಲ್ಲದ ವೃಕ್ಷಾದಿಗಳನ್ನು ಹತ್ತಲು ಪ್ರಯತ್ನಿಸುವವನು ಪತನ ಹೊಂದುವುದು ಲೋಕದಲ್ಲಿ ಕಂಡಿದೆ. ಬ್ರಹ್ಮಾದಿದೇವತಾಪದವು ಆಧಿಕಾರಿಕ. ಸಾಧಕನು ತನ್ನ ಯೋಗ್ಯತೆಗೆ ಮೀರಿದ ಬ್ರಹ್ಮಾದಿ ದೇವತಾಪದವಿಯನ್ನು ಯಾವತ್ತಿಗೂ ಬಯಸಬಾರದು.

**ಅಣುಭಾಷ್ಯ:- 'ಸರ್ವೈಃ ವಿಷ್ಣುಃ ಜ್ಞೇಯಃ'**

**ಭಾವಾರ್ಥ:-** ಈ ಎರಡು ಅಧಿಕರಣಗಳ ಸಾರವನ್ನು ಈ ವಾಕ್ಯದಿಂದ ಸಂಗ್ರಹಿಸಿದ್ದಾರೆ. ಅನಾದಿಯಾದ ಯೋಗ್ಯತೆಯನ್ನು ಹೊಂದಿರುವವರು ಮತ್ತು ಯೋಗ್ಯತೆಗೆ ಮೀರಿದ ಪದವಿಯನ್ನು ಅಪೇಕ್ಷಿಸದೆ ಇರುವವರು ಇವರೆಲ್ಲರಿಂದಲೂ ವಿಷ್ಣುವು ಜ್ಞೇಯನಾಗಿದ್ದಾನೆ.

## ಫಲಶ್ರುತ್ಯಧಿಕರಣ

**II ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ II 3-4-44 II**

ಇಂದ್ರಿಯಾದಿಗಳಿಗೆ ಪ್ರವರ್ತಕರಾಗಿರುವ ದೇವತೆಗಳೇ ಜ್ಞಾನಕ್ಕೆ ಒಡೆಯರು. ಆದ್ದರಿಂದ ಜ್ಞಾನದ ಫಲವೂ ದೇವತೆಗಳಿಗೆ. 'ಸ್ವಾಮೀ ಹಿ ಫಲಮಶ್ನುತೇ ನಾಸ್ವಾಮೀ' ಎಂದು ಶ್ರುತವಾಗಿದೆಯಷ್ಟೆ. ಈ ರೀತಿ ಆತ್ರೇಯರು ಅಭಿಪ್ರಾಯ ಪಡುತ್ತಾರೆ.

**ಅಣುಭಾಷ್ಯ:- 'ನೃಣಾಂ ಸುರಾಣಾಮ್'**

ಭಾವಾರ್ಥ:- ಇದರ ಸಾರವನ್ನು ಈ ವಾಕ್ಯದಿಂದ ಸಂಗ್ರಹಿಸಿದ್ದಾರೆ. ಪ್ರಜೆಗಳ ಪುಣ್ಯದ ಫಲವು ದೇವತೆಗಳಿಗೆ ಅವರವರ ತಾರತಮ್ಯಕ್ಕೆ ಅನುಗುಣವಾಗಿ ದೊರೆಯುವುದು. ಪ್ರಜೆಗಳಿಗೆ ಅಲ್ಪವಾದ ಫಲವು ದೊರೆಯುವುದು.

## ಕೃತ್ಸ್ನಭಾವಾಧಿಕರಣ

**II ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ II 3-4-47 II**

'ಕುಟುಂಬೀ ಶುಚೌ ದೇಶೇ ಸ್ವಾಧ್ಯಾಯಮಧೀಯಾನೋ ಧಾರ್ಮಿಕಾನ್

ವಿದಧತ್' ಎಂಬ ಶ್ರುತಿಯು ಗೃಹಸ್ಥರಿಗೆ ಮೋಕ್ಷವನ್ನು ಹೇಳಿ ಉಪಸಂಹಾರ ಮಾಡಿರುವುದು ದೇವತೆಗಳಿಗೆ ಸಂಬಂಧಿಸಿದೆ. ಗೃಹಸ್ಥಧರ್ಮವನ್ನು ಸಮಗ್ರವಾಗಿ ಪಾಲಿಸುವವರು ದೇವತೆಗಳು.

**ಅಣುಭಾಷ್ಯ:- 'ನೃಣಾಂ ಸುರಾಣಾಂ ಮುಕ್ತೌ ತು ಸುಖಂ ಕ್ಲೃಪ್ತಮ್'**

**ಭಾವಾರ್ಥ:-** ದೇವತೆಗಳು ಸರ್ವಾಶ್ರಮಧರ್ಮವನ್ನು ಪರಿಪಾಲಿಸುವರು. ಹೀಗೆ ಅವರು ಉತ್ತಮರಾದ್ದರಿಂದ ಪ್ರಜೆಗಳ ಪುಣ್ಯದ ಫಲವನ್ನು ಪಡೆಯುವರು.

## ಅನಾವಿಷ್ಕಾರಾಧಿಕರಣ

### ॥ ಓಂ ಅನಾವಿಷ್ಕುರ್ವನ್ನನ್ವಯಾತ್ ಓಂ ॥ 3-4-49 ॥

ಸಭಾದಿ ಬಹಿರಂಗಸ್ಥಳದಲ್ಲಿ ಜ್ಞಾನೋಪದೇಶವನ್ನು ಮಾಡುವುದರಿಂದ ಅಯೋಗ್ಯರಿಗೂ ಜ್ಞಾನಲಾಭವಾಗುವುದು. ಅದು ಅನರ್ಥಕ್ಕೆ ಕಾರಣವಾಗುವುದು. 'ಮಾನಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ.....' ಮುಂತಾದ ಶ್ರುತಿಗಳಲ್ಲಿ ಅಯೋಗ್ಯರಿಗೆ ಜ್ಞಾನವನ್ನು ನಿಷೇಧಿಸಲಾಗಿದೆ.

## ಐಹಿಕಾಧಿಕರಣ

### ॥ ಓಂ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ ॥ 3-4-50 ॥

'ಶ್ರುತ್ವಾತ್ಮಾನಂ ಮತಿಪೂರ್ವಂ ಹ್ಯುಪಾಸ್ಯ ಇಹೈವ ದೃಷ್ಟಿಂ' ಎಂಬ ಶ್ರುತಿಯಲ್ಲಿ ಹೇಳಿದಂತೆ ಪ್ರಾರಬ್ಧಕರ್ಮದ ಪ್ರತಿಬಂಧಕವಿಲ್ಲದಿದ್ದಲ್ಲಿ ಸಾಧನೆಯು ಮುಗಿದ ಜನ್ಮದಲ್ಲಿಯೇ ಅಪರೋಕ್ಷಜ್ಞಾನವಾಗುವುದು. ಪ್ರಾರಬ್ಧಕರ್ಮದ ಪ್ರತಿಬಂಧಕವಿದ್ದರೆ ಜನ್ಮಾಂತರದಲ್ಲಿ ಉಂಟಾಗುವುದು.

**ಅಣುಭಾಷ್ಯ:- 'ತೇನ ಯಾತ್ಯಪರೋಕ್ಷತಾಮ್'**

**ಭಾವಾರ್ಥ:-** ಈ ಅಧಿಕರಣದ ಸಾರವನ್ನು 'ತೇನ ಯಾತ್ಯಪರೋಕ್ಷತಾಮ್' ಎಂಬುದರಿಂದ ಸಂಗ್ರಹಿಸಿದ್ದಾರೆ.

# ಮುಕ್ತಾಫಲಾಧಿಕರಣ

## ॥ ಓಂ ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವ ಸ್ಥಾವಧೃತೇಃ ಓಂ ॥ 3-4-51 ॥

ಜ್ಞಾನದಲ್ಲಿ ಹೇಗೋ ಹಾಗೆಯೇ ಫಲದ ವಿಷಯದಲ್ಲೂ ಸಹ 'ಬ್ರಹ್ಮಸಂಸ್ಥೋಽಮೃತತ್ವಮೇತ್ಯೇವ' ಬ್ರಹ್ಮಜ್ಞಾನಿಗೆ ಮೋಕ್ಷರೂಪಫಲವು ನಿಶ್ಚಿತ ಎಂದು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಅಪರೋಕ್ಷಜ್ಞಾನವಾದ ಜನ್ಮದಲ್ಲಿಯೇ ಮುಕ್ತಿಯಾಗದಿದ್ದರೆ ಮುಕ್ತಿಯೇ ಇಲ್ಲ ಎನ್ನಬಾರದು. ಪ್ರಾರಬ್ಧಕರ್ಮದ ಪ್ರತಿಬಂಧವಿಲ್ಲದಿದ್ದಲ್ಲಿ ಆ ಜನ್ಮದಲ್ಲಿಯೇ ಮುಕ್ತಿಯಾಗುವುದು, ಪ್ರತಿಬಂಧವಿದ್ದಲ್ಲಿ ಜನ್ಮಾಂತರದಲ್ಲಿ ಆಗುವುದು.

**ಅಣುಭಾಷ್ಯ:- 'ಜ್ಞಾನಾದೇವ ಸರ್ವಪುರುಷಾರ್ಥಾಃ ಸ್ಯುಃ ನ ಸಂಶಯಃ'**

**ಭಾವಾರ್ಥ:-** ಜ್ಞಾನದಿಂದಲೇ ಮುಕ್ತಿಯು ದೊರೆಯುವುದು. ಇದರಲ್ಲಿ ಏನೂ ಸಂಶಯವಿಲ್ಲ. ಪ್ರತಿಬಂಧವಿದ್ದಲ್ಲಿ ಅದರ ನಿವೃತ್ತಿಯವರೆಗೂ ಮೋಕ್ಷವು ದೊರೆಯುವುದಿಲ್ಲ.



# ಚತುರ್ಥೋಽಧ್ಯಾಯಃ

## (ಫಲಾಧ್ಯಾಯಃ)

### ಪ್ರಥಮಪಾದ

**ಅಣುಭಾಷ್ಯ:- 'ವಿಷ್ಣುರ್ಬ್ರಹ್ಮ ತಥಾ ದಾತೇತ್ಯೇವಂ ನಿತ್ಯಮುಪಾಸನಮ್ । ಕಾರ್ಯಮ್..........' ॥**

ವಿಷ್ಣುವೇ ಸರ್ವೋತ್ಕೃಷ್ಟ, ಹಾಗೆಯೇ ಅವನೇ ಮೋಕ್ಷವನ್ನು ನೀಡುವವನು. ಜಗತ್ತಿನ ಒಡೆಯ ಎಂದು ನಿತ್ಯದಲ್ಲೂ ಉಪಾಸನೆ ಮಾಡಬೇಕು.

ಕರ್ಮಕ್ಷಯರೂಪಫಲವನ್ನು ಈ ಪಾದದಲ್ಲಿ ನಿರೂಪಿಸುತ್ತಾರೆ.

## ಆವೃತ್ತ್ಯಧಿಕರಣ

**॥ ಓಂ ಆವೃತ್ತಿರಸಕೃದುಪದೇಶಾತ್ ಓಂ ॥ 4-1-1 ॥**

ಅಪರೋಕ್ಷಜ್ಞಾನದ ಸಿದ್ಧಿಗಾಗಿ ಶ್ವೇತಕೇತುವನ್ನು ಕುರಿತು ಉದ್ದಾಲಕರು ಒಂಭತ್ತು ಬಾರಿ ತತ್ತ್ವೋಪದೇಶವನ್ನು ಮಾಡಿರುವರು. ತತ್ವಜ್ಞಾನವನ್ನು ಸಂಪಾದಿಸಿದ್ದ ಭೃಗುಮಹರ್ಷಿಯು ಪುನಃಪುನಃ ತಂದೆಯ ಉಪದೇಶವನ್ನು ಪಡೆದಿದ್ದಾನೆ. ಈ ಎಲ್ಲ ಕಾರಣದಿಂದ ಶ್ರವಣಮನನಾದಿಗಳನ್ನು ಪುನಃಪುನಃ ಮಾಡಿದಾಗಲೇ ಫಲವು ದೊರೆಯುತ್ತದೆಂದು ತಿಳಿಯುತ್ತದೆ.

**ಅಣುಭಾಷ್ಯ:- 'ನಿತ್ಯಮುಪಾಸನಂ ಕಾರ್ಯಮ್'**

**ಭಾವಾರ್ಥ:-** ಜ್ಞಾನಸಾಧನವಾದ ಶಾಸ್ತ್ರಾಭ್ಯಾಸಾದಿರೂಪ ಶ್ರವಣಮನನಗಳನ್ನು ಸರ್ವದಾ ಮಾಡಬೇಕು. ಜ್ಞಾನವೇ ಅದರ ಫಲ. ಆದ್ದರಿಂದ ಜ್ಞಾನ ದೊರೆಯುವವರೆಗೆ ನಿರಂತರವಾಗಿ ಅದನ್ನು ಮಾಡಬೇಕು.

## ಆತ್ಮೋಪಗಮಾಧಿಕರಣ

**॥ ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ ॥ 4-1-3 ॥**

ಮೋಕ್ಷವನ್ನು ಅಪೇಕ್ಷಿಸುವ ಸಾಧಕನು ವಿಷ್ಣುವೇ ಆತ್ಮಾ = ಜಗತ್ತಿನ ಸ್ವಾಮಿ ಎಂದು ಉಪಾಸನೆಯನ್ನು ಅವಶ್ಯವಾಗಿ ಮಾಡಬೇಕು. ಅಪ್ರಸಿದ್ಧವಾದ ಗುಣದ ಉಪಾಸನೆಯನ್ನು ಮಾಡಬೇಕೆಂಬ ನಿಯಮವಿಲ್ಲ. ಮಹಾನುಭಾವರೂ ಸ್ವಾಮಿತ್ವದ ಉಪಾಸನೆಯನ್ನು ಮಾಡಿರುತ್ತಾರೆ. ಹಾಗೆಯೇ ಉಪದೇಶವನ್ನು ನೀಡಿರುತ್ತಾರೆ. ಸ್ವಾಮಿತ್ವದ ಉಪಾಸನೆಯು ಮೋಕ್ಷಸಾಧನವಾಗಿದೆ. ಈ ರೀತಿ ಉಪಾಸನೆಯನ್ನು ಮಾಡದಿದ್ದರೆ ಮೋಕ್ಷವೇ ಇಲ್ಲವೆಂದು ಸ್ಮೃತಿಗಳು ಹೇಳುತ್ತವೆ.

**ಅಣುಭಾಷ್ಯ:- 'ವಿಷ್ಣುರಾದಾತೇತ್ಯೇವಂ ನಿತ್ಯಮುಪಾಸನಂ ಕಾರ್ಯಮ್'**

**ಭಾವಾರ್ಥ:-** ಮೋಕ್ಷದ ಒಡೆತನ ಭಗವಂತನದ್ದು. ಆದ್ದರಿಂದ ಅವನೇ ಮೋಕ್ಷವನ್ನು ನೀಡುವವನು. 'ವಿಷ್ಣುರ್ಹಿ ದಾತಾ ಮೋಕ್ಷಸ್ಯ.....' ಎಂದು ಪ್ರಮಾಣವಚನವಿದೆ. ಆದತ್ತೇ ಇತಿ ಆತ್ಮಾ. ಭಕ್ತರನ್ನು ಸ್ವಕೀಯರೆಂದು ಸ್ವೀಕರಿಸಿ ಅವರಿಗೆ ಮೋಕ್ಷವನ್ನು ನೀಡುವವನು ಭಗವಂತ. ಅವನೇ ಸ್ವಾಮೀ, ಬ್ರಹ್ಮ = ಗುಣಪೂರ್ಣ ಎಂದು ನಿತ್ಯದಲ್ಲೂ ಉಪಾಸಿಸಬೇಕು. ಯೋಗವೃತ್ತಿಯಿಂದ ಆತ್ಮಶಬ್ದವು 'ಸ್ವಾಮಿ' ಎಂದು ಅರ್ಥವುಳ್ಳದ್ದು ಎಂದು ಸೂತ್ರದಲ್ಲಿರುವ 'ಆತ್ಮ'ಶಬ್ದವನ್ನು ವ್ಯಾಖ್ಯಾನಿಸುವ ಉದ್ದೇಶದಿಂದಲೇ ಅಣುಭಾಷ್ಯದಲ್ಲಿ 'ವಿಷ್ಣುರಾತ್ಮಾ' ಎನ್ನದೇ 'ವಿಷ್ಣುರಾದಾತಾ' ಎಂದಿದ್ದಾರೆ.

ಗುಣಪೂರ್ಣನಾದ ಸ್ವಾಮಿಯೇ ವಿಷ್ಣು. ವಿಷ್ಣುವೇ ಗುಣಪೂರ್ಣನಾದ ಸ್ವಾಮೀ ಎಂದು ವಿಶೇಷಣ ವಿಶೇಷ್ಯಭಾವದಿಂದ ಉಪಾಸಿಸಬೇಕು.

ನಾವು ಹೇಳಿದ ಪ್ರಕಾರದಲ್ಲಿಯೇ ಉಪಾಸಿಸಬೇಕು. ಇದನ್ನು ಬಿಟ್ಟು ಪ್ರತೀಕವೇ ಬ್ರಹ್ಮ ಅಥವಾ ಜೀವನೇ ಬ್ರಹ್ಮ ಎಂಬುದಾಗಿ ಎಂದಿಗೂ ಉಪಾಸನೆ ಮಾಡಬಾರದು ಎಂಬ ಅಭಿಪ್ರಾಯದಲ್ಲಿ 'ಏವಂ'ಶಬ್ದವನ್ನು ಪ್ರಯೋಗಿಸಿದ್ದಾರೆ.

## ನ ಪ್ರತೀಕಾಧಿಕರಣ

### ॥ ಓಂ ನ ಪ್ರತೀಕೇ ನ ಹಿ ಸಃ ಓಂ ॥ 4-1-4 ॥

ನಾಮಾದಿ ಪ್ರತೀಕವೇ ಬ್ರಹ್ಮ ಎಂದು ಉಪಾಸನೆಯನ್ನು ಮಾಡಬಾರದು. 'ನಾಮ ಬ್ರಹ್ಮೇತ್ಯುಪಾಸೀತ' ಎಂಬ ಶ್ರುತಿಗೆ ನಾಮಾದಿ ಪ್ರತೀಕದಲ್ಲಿ ಬ್ರಹ್ಮನಿದ್ದಾನೆ

ಎಂದು ಉಪಾಸನೆಯನ್ನು ಮಾಡಬೇಕು ಎಂದು ಅಭಿಪ್ರಾಯ. ಪ್ರತೀಕವೇ ಬ್ರಹ್ಮ ಎಂಬ ಉಪಾಸನೆಯು ಮಿಥ್ಯೋಪಾಸನೆಯಾದ್ದರಿಂದ ಅದು ಅನರ್ಥಕ್ಕೆ ಕಾರಣವಾಗುವುದು.

**ಅಣುಭಾಷ್ಯ:- 'ಏವಂ ತಥಾ ನಿತ್ಯಮುಪಾಸನಂ ಕಾರ್ಯಮ್'**

**ಭಾವಾರ್ಥ:-** 'ವಿಷ್ಣುವು ಸ್ವಾಮೀ' ಎಂದೇ ಸರ್ವದಾ ಉಪಾಸನೆಯನ್ನು ಮಾಡಬೇಕು. ಪ್ರತೀಕವೇ ಬ್ರಹ್ಮ ಎಂದು ಐಕ್ಯೋಪಾಸನೆಯನ್ನು ಎಂದಿಗೂ ಮಾಡಬಾರದು.

## ಬ್ರಹ್ಮದೃಷ್ಟ್ಯಧಿಕರಣ

### ॥ ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ ॥ 4-1-5 ॥

ಆತ್ಮನಲ್ಲಿ ಬ್ರಹ್ಮತ್ವದ ಉಪಾಸನೆಯನ್ನು ಮಾಡಬೇಕು. ಬ್ರಹ್ಮತ್ವದ ಉಪಾಸನೆ ಎಂದರೆ ಸರ್ವೋತ್ಕೃಷ್ಟತ್ವದ ಉಪಾಸನೆ. ಇದು ಬೇರೆ ಎಲ್ಲ ಉಪಾಸನೆಗಳಿಗಿಂತ ಅತಿಶಯವಾದ ಭಗವತ್‌ಪ್ರಸಾದಕ್ಕೆ ಕಾರಣ.

**ಅಣುಭಾಷ್ಯ:- 'ವಿಷ್ಣುರ್ಬ್ರಹ್ಮೇತ್ಯುಪಾಸನಂ ಕಾರ್ಯಮಾಪದ್ಯಪಿ'**

**ಭಾವಾರ್ಥ:-** ಬ್ರಹ್ಮತ್ವದ ಉಪಾಸನೆಯನ್ನು ನಿತ್ಯದಲ್ಲೂ ಮಾಡಬೇಕು. ಇದು ಪರಮಾತ್ಮನ ಉತ್ಕೃಷ್ಟತ್ವವನ್ನು ತಿಳಿಸುವುದು. ಆಧಿ-ವ್ಯಾಧಿ ಮುಂತಾದ ಯಾವಕಾರಣದಿಂದಲೂ ಈ ಉಪಾಸನೆಯನ್ನು ಬಿಡಬಾರದು ಬ್ರಹ್ಮತ್ವಯುಕ್ತ ವಾಗಿಯೇ ಆತ್ಮತ್ವದ ಅಂದರೆ ಸ್ವಾಮಿತ್ವದ ಉಪಾಸನೆಯನ್ನು ಮಾಡಬೇಕು ಎಂದು ತಿಳಿಸಲು 'ವಿಷ್ಣುಃ ಬ್ರಹ್ಮ ತಥಾ ಆದಾತಾ' ಎಂಬಲ್ಲಿ 'ತಥಾ' ಶಬ್ದವನ್ನು ಪ್ರಯೋಗಿಸಿದ್ದಾರೆ.

## ಆದಿತ್ಯಾಧಿಕರಣ

### ॥ ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ ॥ 4-1-6 ॥

ಆದಿತ್ಯಾದಿ ದೇವತೆಗಳು ಭಗವಂತನ ಅಂಗಾಂಗಗಳನ್ನು ಆಶ್ರಯಿಸಿದ್ದಾರೆಂದು ದೇವತೆಗಳು ಉಪಾಸಿಸಬೇಕು. ಸೂರ್ಯಾದಿದೇವತೆಗಳು ಸದಾ ಸಂಚಾರ

ಮಾಡುತ್ತಿದ್ದರೂ ಬೇರೆರೂಪದಿಂದ ಭಗವಂತನ ಆಯಾಯಾ ಅಂಗಗಳನ್ನೇ ಆಶ್ರಯಿಸಿರುತ್ತಾರೆ. ಮುಕ್ತಿಯಲ್ಲಿ ಆ ಅಂಗದಲ್ಲಿ ಪ್ರವೇಶವೂ ಅವರಿಗೆ ಅಪೇಕ್ಷಿತ. 'ಸ್ತೋತ್ರವ್ಯಂಗಂ ಚ ದೇವಾನಾಂ ವಿಷ್ಣೋಶ್ಚಿಂತ್ಯಂ ಸದೈವ ತು' ಎಂದು ಸ್ಮ ೃತಿಯೂ ಇದೆ.

**ಅಣುಭಾಷ್ಯ:- 'ವಿಷ್ಣುರಾದಾತೇತ್ಯೇವಮುಪಾಸನಂ ಕಾರ್ಯಮ್'**

ಭಾವಾರ್ಥ:- ವಿಷ್ಣುವು ತನ್ನ ಅಂಗದಿಂದ ನನ್ನನ್ನು ಆದಾತಾ = ಸೃಷ್ಟಿಸಿದವನು, ಅದೇ ಅಂಗದಲ್ಲಿಯೇ ನನ್ನನ್ನು ಆದಾತಾ = ಸ್ಥಾಪಿಸಿರುವನು, ಅಲ್ಲಿಯೇ ಸಂಹಾರಕನೂ ಸಹ ಎಂದು ದೇವತೆಗಳು ತಮ್ಮ ಸೃಷ್ಟ್ಯಾದಿಸ್ಥಾನವಾದ ಭಗವಂತನ ಅಂಗಗಳ ಉಪಾಸನೆಯನ್ನು ಮಾಡಬೇಕು.

## ಆಸೀನಾಧಿಕರಣ

### ॥ ಓಂ ಆಸೀನಃ ಸಂಭವಾತ್ ಓಂ ॥ 4-1-7 ॥

ಕುಳಿತುಕೊಳ್ಳದೆ ಉಪಾಸನೆಯು ಸಾಧ್ಯವಿಲ್ಲ. ನಿಂತಿರುವಾಗ ಓಡಾಡುವಾಗ ಚಿತ್ತಚಾಂಚಲ್ಯವಾಗುತ್ತದೆ. ಕೇವಲ ಸ್ಮರಣೆಯನ್ನು ಮಾಡಬಹುದಷ್ಟೆ. ಆದ್ದರಿಂದ ಕುಳಿತೇ ಉಪಾಸನೆಯನ್ನು ಮಾಡಬೇಕು.

**ಅಣುಭಾಷ್ಯ:- 'ತಥೋಪಾಸನಂ ಕಾರ್ಯಮ್'**

ಭಾವಾರ್ಥ:- 'ಉಪವಿಶ್ಯಾಸನೇ ಯುಂಜ್ಯಾತ್. ಯೋಗಮಾತ್ಮವಿಶುದ್ಧಯೇ' ಎಂದು ಸ್ಮ ೃತಿಯು ಪ್ರಮಾಣವಾಗಿದೆ. ಆದ್ದರಿಂದ ಆಸನದಲ್ಲಿ ಕುಳಿತೇ ಉಪಾಸನೆಯನ್ನು ಮಾಡಬೇಕು.

## ಆಪ್ರಾಯಣಾಧಿಕರಣ:-

### ॥ ಓಂ ಆಪ್ರಾಯಣಾತ್ ತತ್ರಾಪಿ ಹಿ ದೃಷ್ಟಮ್ ಓಂ ॥ 4-1-12 ॥

ಭಗವಂತನ ಅಪರೋಕ್ಷಜ್ಞಾನಕ್ಕಾಗಿಯೇ ಶ್ರವಣಮನನನಿಧಿಧ್ಯಾಸನಗಳು ವಿಹಿತವಾಗಿದ್ದರೂ ಮೋಕ್ಷಪರ್ಯಂತ ಧ್ಯಾನವನ್ನು ಮಾಡಬೇಕು. 'ಪ್ರಾಯಣಾಂತಮೋಂಕಾರಮಭಿಧ್ಯಾಯೀತ' ಎಂದು ಶ್ರುತಿ ಇದೆ.

**ಅಣುಭಾಷ್ಯ:- 'ಆಪದ್ಯುಪಾಸನಂ ಕಾರ್ಯಮ್'**

**ಭಾವಾರ್ಥ:-** ಈ ಉಪಾಸನೆಯನ್ನು ಯಾವ ಕ್ಷಣದಲ್ಲಿಯೂ ನಿಲ್ಲಿಸಬಾರದು, ಲಿಂಗಭಂಗರೂಪವಾದ ಆಪತ್ತಿನಲ್ಲಿಯೂ ಉಪಾಸನೆಯನ್ನು ಮಾಡಬೇಕು.

## ತದಧಿಗಮಾಧಿಕರಣ

### ॥ ಓಂ ತದಧಿಗಮ ಉತ್ತರ ಪೂರ್ವಾಘಯೋರಶ್ಲೇಷವಿನಾಶೌ ತದ್‌ವ್ಯಪದೇಶಾತ್ ಓಂ ॥ 4-1-13 ॥

ಜ್ಞಾನದಿಂದಲೇ ಮೋಕ್ಷ, ಬ್ರಹ್ಮನ ಅಪರೋಕ್ಷಜ್ಞಾನದಿಂದ ಜ್ಞಾನಪೂರ್ವ ಪಾಪದನಾಶವೂ ಜ್ಞಾನೋತ್ತರ ಪಾಪದ ಅಲೇಪವೂ ಉಂಟಾಗುತ್ತದೆ.. 'ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಂ ಏವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ' ಎಂದು ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ.

**ಅಣುಭಾಷ್ಯ:- 'ಪ್ರಾರಬ್ಧಕರ್ಮಣೋಽನ್ಯಸ್ಯ ಜ್ಞಾನಾದೇವ ಪರಿಕ್ಷಯಃ'**

**ಭಾವಾರ್ಥ:-** ಪ್ರಾರಬ್ಧಕರ್ಮವು ಕೇವಲ ಭೋಗದಿಂದ ಮಾತ್ರ ನಾಶವನ್ನು ಹೊಂದುವುದು. ಅಪ್ರಾರಬ್ಧಕರ್ಮವು ಮಾತ್ರ ಜ್ಞಾನದಿಂದ ನಶಿಸುವುದು.

ಕರ್ಮವು ಮೂರುವಿಧ 1. ಸಂಚಿತ; 2. ಪ್ರಾರಬ್ಧ; 3. ಆಗಾಮಿ.

ಸಂಚಿತವು ಎರಡು ವಿಧ- 1. ಪುಣ್ಯ; 2. ಪಾಪ.

ಪಾಪವು ಎರಡು ವಿಧ- 1. ಅಕಾಮ್ಯ; 2. ಕಾಮ್ಯ.

ಕಾಮ್ಯವು ಎರಡು ವಿಧ- 1. ಇಷ್ಟ; 2. ಅನಿಷ್ಟ.

ಅಪರೋಕ್ಷಜ್ಞಾನಕ್ಕೆ ಅಕಾಮ್ಯಪುಣ್ಯದ ಉಪಯೋಗವಿದೆ. ಕಾಮ್ಯವಾದ ಇಷ್ಟಪುಣ್ಯವು ಭೋಗದಿಂದಲೇ ನಾಶವಾಗುವುದು. ಕಾಮ್ಯದಲ್ಲಿ ಅನಿಷ್ಟಪುಣ್ಯ ಮತ್ತು ಪಾಪವೆರಡೂ ಜ್ಞಾನದಿಂದ ನಾಶವಾಗುತ್ತದೆ.

ಪ್ರಾರಬ್ಧವು ಎರಡು ವಿಧ- ಇದು ಸಮಗ್ರವಾಗಿ ಭೋಗದಿಂದಲೇ ನಾಶವನ್ನು ಹೊಂದುತ್ತದೆ.

ಆಗಾಮಿಕರ್ಮವು ಎರಡು ವಿಧ- 1. ಪುಣ್ಯ; 2. ಪಾಪ.

ಪುಣ್ಯವು ಎರಡುವಿಧ- 1. ಅಕಾಮ್ಯ; 2. ಕಾಮ್ಯ.

ಕಾಮ್ಯವು ಎರಡು ವಿಧ- 1. ಇಷ್ಟ; 2. ಅನಿಷ್ಟ. ಅಕಾಮ್ಯಪುಣ್ಯವು ಮೋಕ್ಷದಲ್ಲಿ ಆನಂದಾತಿಶಯಕ್ಕೆ ಕಾರಣವಾಗುತ್ತದೆ. ಕಾಮ್ಯವಾದ ಇಷ್ಟಪುಣ್ಯವನ್ನು ಜ್ಞಾನಿಯು ಭೋಗಿಸುತ್ತಾನೆ. ಅನಿಷ್ಟಪುಣ್ಯದ ಲೇಪವೇ ಜ್ಞಾನಿಗೆ ಇಲ್ಲ. 'ಸುಹೃದಃ ಸಾಧುಕೃತ್ಯಾಮ್' ಎಂಬ ಶ್ರುತಿಯಂತೆ ಅನಿಷ್ಟಪುಣ್ಯವನ್ನು ಜ್ಞಾನಿಯ ಮಿತ್ರರು ಭೋಗಿಸುತ್ತಾರೆ.

ಪಾಪವೂ ಎರಡುವಿಧ- 1.ಅಲ್ಪ; 2. ಮಹತ್. ಅಲ್ಪವಾದ ಪಾಪದ ಲೇಪವು ಜ್ಞಾನಿಗೆ ಇಲ್ಲ. 'ದ್ವಿಷಂತಃ ಪಾಪಕೃತ್ಯಮ್' ಎಂಬ ಶ್ರುತಿಯು ಹೇಳುವಂತೆ ಆ ಪಾಪವು ದ್ವೇಷಿಗಳಿಗೆ ಹೋಗಿ ತಲುಪುತ್ತದೆ.

ಮಹತ್ತರವಾದ ಪಾಪದಿಂದ ಮಾನುಷಜ್ಞಾನಿಗಳಿಗೆ ಅವರ ಯೋಗ್ಯತಾನುಸಾರಿಯಾಗಿ ಕ್ಲೃಪ್ತವಾದ ಆನಂದದಲ್ಲಿಯೇ ಹ್ರಾಸವುಂಟಾಗುತ್ತದೆ.

ದೇವತಾಜ್ಞಾನಿಗಳಿಗೆ ಮಹತ್ತರವಾದ ಪಾಪದಿಂದ ಕ್ಲೃಪ್ತವಾದ ಆನಂದಕ್ಕೆ ಹಾನಿ ಇಲ್ಲದಿದ್ದರೂ ತಮ್ಮ ಯೋಗ್ಯತೆಯನ್ನು ಮೀರಿದ ಅಧಿಕ ಸಾಧನದಿಂದ ಕ್ಲೃಪ್ತವಾದ ಆನಂದದ ಹ್ರಾಸವೂ ಮತ್ತು ಮೋಕ್ಷದಲ್ಲಿ ಆ ಜ್ಞಾನಿಗಳಿಂದ ಭೋಗಿಸಲ್ಪಡಬೇಕಾದ ಕ್ಲೃಪ್ತವಾದ ಆನಂದದ ಅಲೆಗಳಲ್ಲಿಯೇ ಹ್ರಾಸವೂ ಉಂಟಾಗುತ್ತದೆ.

### ದ್ವಿತೀಯಪಾದ

## ದೇಹತ್ಯಾಗಪ್ರಕಾರ

**ಅಣುಭಾಷ್ಯ:- 'ಉತ್ತರೇಷೂತ್ತರೇಷ್ವೇವಂ ಯಾವದ್ವಾಯುಂ ವಿಮುಕ್ತಿಗಾಃ । ಪ್ರವಿಶ್ಯ ಭುಂಜತೇ ಭೋಗಾಂಸ್ತದಂತರ್ಬಹಿರೇವ ವಾ' ॥**

**ಭಾವಾರ್ಥ:-** ಮೋಕ್ಷವನ್ನು ಹೊಂದುವ ದೇವತೆಗಳು ತಮಗಿಂತಲೂ ಉತ್ತಮರಾದ ದೇವತೆಗಳಲ್ಲಿ ಪ್ರವೇಶವನ್ನು ಹೊಂದಿ ಅನಂತರ ವಾಯುದೇವರ

ಪರ್ಯಂತವಾಗಿ ಪ್ರವೇಶಿಸಿ ಅವರ ದೇಹದ ಒಳಭಾಗದಲ್ಲಿ ಅಥವಾ ಹೊರಭಾಗದಲ್ಲಿ ಬಂದು ಭೋಗವನ್ನು ಅನುಭವಿಸುವರು.

## ವಾಙ್ಮನಸಾಧಿಕರಣ

### ॥ ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ ॥ 4-2-1 ॥

ವಾಗಿಂದ್ರಿಯವು ಮನಸ್ಸಿನ ಅಧೀನವಾಗಿರುವುದು ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಆದ್ದರಿಂದ ವ್ಹಾಕ್ ಮನಸ್ಸಿನಲ್ಲಿ ಲಯವನ್ನು ಹೊಂದುವುದು. 'ಮನಸಾ ವಾಗ್ರೇ ಸಂಕಲ್ಪಯತ್ಯಥ ವಾಚಾ ವ್ಯಾಹರತಿ' ಎಂದು ಯುಕ್ತಿಯು ಶ್ರುತಿಸಿದ್ಧವಾಗಿದೆ. ವಾಕ್ ಎಂದರೆ ಉಮಾದೇವಿ. ಮನಸ್ ಎಂದರೆ ರುದ್ರದೇವರು.

## ಮನೋಧಿಕರಣ

### ॥ ಓಂ ತನ್ಮನಃ ಪ್ರಾಣ ಉತ್ತರಾತ್ ಓಂ ॥ 4-2-3 ॥

'ಮನಃ ಪ್ರಾಣೇ' ಎಂದು ಶ್ರುತವಾಗಿರುವುದರಿಂದ ಮನಸ್ಸು ಪ್ರಾಣತತ್ವದಲ್ಲಿ ಲಯವನ್ನು ಹೊಂದುವುದು, ಅಂದರೆ ಮನೋಭಿಮಾನಿಗಳಾದ ಶೇಷ, ಸುಪರ್ಣರು ಚತುರ್ಮುಖನಲ್ಲಿ ಲಯವನ್ನು ಹೊಂದುವರು.

**ಅಣುಭಾಷ್ಯ:- ಉತ್ತರೇಷೂತ್ತರೇಷ್ವೇವಂ ಯಾವದ್‌ವಾಯುಂ ವಿಮುಕ್ತಿಗಾಃ'**

**ಭಾವಾರ್ಥ:-** ಮನೋಭಿಮಾನಿಯಾದ ರುದ್ರದೇವರಿಗೆ ಪ್ರಾಣನಲ್ಲಿ ಲಯ. ಗರುಡಶೇಷರಿಗೆ ಬ್ರಹ್ಮನಲ್ಲಿ ಲಯ. ಎಲ್ಲ ದೇವತೆಗಳೂ ತಮ್ಮ ನಿಯಮ್ಯ ನಿಯಾಮಕಾಭಾವಕ್ಕನುಗುಣವಾಗಿ ತಮ್ಮ ನಿಯಾಮಕರಲ್ಲಿ ಲಯವನ್ನು ಹೊಂದುವರು.

## ಅಕ್ಷರಾಧಿಕರಣ

### ॥ ಓಂ ಸೋಽಧ್ಯಕ್ಷೇ ತದುಪಗಮಾದಿಭ್ಯಃ ಓಂ ॥ 4-2-4 ॥

ಚತುರ್ಮುಖಬ್ರಹ್ಮದೇವರು ಪರಮಾತ್ಮನ ಅಧೀನರಾದ್ದರಿಂದ ಪರಮಾತ್ಮನಲ್ಲಿ ಲಯ ಹೊಂದುವರು. 'ಪ್ರಾಣಃ ಪರಮುಪಗಚ್ಛತಿ' ಎಂದು ಶ್ರುತಿಯು ಹಾಗು 'ಅಗ್ನಿರಿಂದ್ರೇ ತಥೇಂದ್ರಶ್ಚ ವಾಯುಮಾವಿಶ್ಯ ಸೋಽಪಿ ತು । ಆವಿಶ್ಯ ಪರಮಾತ್ಮಾನಂ ಭುಂಕ್ತೇ ಭೋಗಾಂಶ್ಚ ಬಾಹ್ಯಕಾನ್' ಎಂದು ಸ್ಮೃತಿಯೂ ಈ ವಿಷಯದಲ್ಲಿ ಪ್ರಮಾಣವಾಗಿವೆ.

**ಅಣುಭಾಷ್ಯ:-** **'ವಾಯುಃ ವಿಷ್ಣುಂ ಪ್ರವಿಶ್ಯೈವ'**

**ಭಾವಾರ್ಥ:-** ಚತುರ್ಮುಖಬ್ರಹ್ಮದೇವರು ಶ್ರೀದೇವಿಯಿಂದ ಪ್ರೇರಿತರಾಗಿ ಅಲ್ಲಿ ತಮ್ಮ ಲಿಂಗಶರೀರವನ್ನು ನಾಶಗೊಳಿಸಿ ಸಚ್ಚಿದಾನಂದಶರೀರರಾಗಿ ವಿಷ್ಣುವನ್ನೇ ಆಶ್ರಯಿಸಿ ಎಲ್ಲ ಭೋಗಗಳನ್ನು ಅನುಭವಿಸುವರು.

## ಭೂತಾಧಿಕರಣಮ್

### ॥ ಓಂ ಭೂತೇಷು ತಚ್ಛ್ರುತೇಃ ಓಂ ॥ 4-2-5 ॥

'ಭೂತೇಷು ದೇವಾ ವಿಲೀಯಂತೇ' ಎಂದು ಶ್ರುತಿ ಇರುವುದರಿಂದ ಹಿಂದೆ ಹೇಳಿದ್ದಕ್ಕಿಂತಲೂ ಇತರರಾದ ದೇವತೆಗಳು ಭೂತಾಭಿಮಾನಿ ದೇವತೆಗಳಲ್ಲಿ ಲಯವನ್ನು ಹೊಂದುವರು.

## ಅನೇಕಲಯಾಧಿಕರಣ

### ॥ ಓಂ ನೈಕಸ್ಮಿನ್ ದರ್ಶಯತೋ ಹಿ ಓಂ ॥ 4-2-6 ॥

'ಪೃಥಿವ್ಯಾ ಋಭವೋ ವಿಲೀಯಂತೇ ವರುಣೇಽಶ್ವಿನಾವಗ್ನಾವಗ್ನಯಃ' ಎಂದು ಶ್ರುತಿ ಇರುವುದರಿಂದ ಎಲ್ಲ ದೇವತೆಗಳೂ ಲಯವನ್ನು ಹೊಂದುವರು. 'ಅಗ್ನೌ ದೇವಾ ವಿಲೀಯಂತೇ' ಎಂದು ಶ್ರುತಿಯು ಅಗ್ನಿಯಲ್ಲಿ ಅಗ್ನಿಪುತ್ರರಿಗೆ ಮಾತ್ರ ಲಯವನ್ನು ಹೇಳುತ್ತದೆ.

**ಅಣುಭಾಷ್ಯ:-** **'ಉತ್ತರೇಷೂತ್ತರೇಷ್ವೇವಂ'**

**ಭಾವಾರ್ಥ:-** ಜ್ಞಾನ ಮತ್ತು ಭೋಗದಿಂದ ಕರ್ಮದ ನಾಶವನ್ನು

ಮಾಡಿಕೊಂಡಿರುವ ಅಧಿಕಾರಿಗಳು ತಾರತಮ್ಯಕ್ಕನುಗುಣವಾಗಿ ತಮಗಿಂತ ಉತ್ತಮರಲ್ಲಿ ಪ್ರವೇಶಿಸುವರು. ಈ ವಾಕ್ಯದಿಂದಲೇ ಈ ಎರಡು ಅಧಿಕರಣಗಳ ಅಭಿಪ್ರಾಯವನ್ನು ಸಂಗ್ರಹಿಸಿದ್ದಾರೆ.

## ಸಮನಾಧಿಕರಣ

### ॥ ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ ॥ 4-2-7 ॥

ರಮಾದೇವಿಗೆ ಲಯವಿಲ್ಲ. ಸಾಧನೆ ಇಲ್ಲದೆ ಸ್ವಾಭಾವಿಕವಾಗಿಯೇ ನಿತ್ಯಮುಕ್ತಳಾಗಿರುವಳು. ಭಗವಂತನಂತೆ ನಿತ್ಯ ಹಾಗು ಸರ್ವಗತಳಾಗಿದ್ದಾಳಾದ್ದರಿಂದ ಸಂಸಾರರಹಿತಳು. 'ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ' ಎಂದು ವಚನವಿರುವುದರಿಂದ ಭಗವಂತನ ಅತಿಸಾಮೀಪ್ಯರೂಪವಾದ ಲಯವನ್ನು 'ತೇಜಃ ಪರಸ್ಯಾಮ್' ಎಂಬ ಶ್ರುತಿಯು ಹೇಳುತ್ತದೆ. ಹೊರತು ಇತರ ದೇವತೆಗಳಿಗಿರುವಂತೆ ಲಯವಲ್ಲ.

**ಅಣುಭಾಷ್ಯ:- 'ವಾಯುಃ ವಿಷ್ಣುಮೇವ ಪ್ರವಿಶ್ಯ'**

**ಭಾವಾರ್ಥ:-** ಚತುರ್ಮುಖಬ್ರಹ್ಮದೇವರು ವಿಷ್ಣುವನ್ನೇ ಪ್ರವೇಶಿಸಿ ಭೋಗವನ್ನು ಅನುಭವಿಸುವರು. 'ವಿಷ್ಣುಮೇವ' ಎಂಬಲ್ಲಿರುವ 'ಏವ'ಕಾರದಿಂದ ಲಕ್ಷ್ಮೀದೇವಿಯಲ್ಲಿ ಪ್ರವೇಶಿಸುವುದಿಲ್ಲ ಎಂದು ತಿಳಿಯುವುದು, ಪರಮಾತ್ಮನಲ್ಲಿ ಲಯದಿಂದಲೇ ಮುಕ್ತಿ ಹೊರತಾಗಿ ಲಕ್ಷ್ಮೀದೇವಿಯಲ್ಲಿ ಲಯದಿಂದ ಅಲ್ಲ.

## ಪರಾ(ಲಯಾ)ಧಿಕರಣ

### ॥ ಓಂ ತಾನಿ ಪರೇ ತಥಾ ಹ್ಯಾಹ ಓಂ ॥ 4-2-15 ॥

'ಸರ್ವೇ ದೇವಾಃ ಪ್ರಾಣಮಾವಿಶ್ಯ ದೇವೇ ಮುಕ್ತಾ ಲಯಂ ಪರಮೇ ಯಾಂತ್ಯಚಿಂತ್ಯೇ' ಎಂದು ಶ್ರುತಿ ಇರುವುದರಿಂದ ದೇವತೆಗಳು ಪ್ರಾಣನ ಮೂಲಕ ಪರಮಾತ್ಮನಲ್ಲಿ ಲಯವನ್ನು ಹೊಂದುವರು.

**ಅಣುಭಾಷ್ಯ:- 'ಸುರಾಃ ವಿಷ್ಣುಂ ಪ್ರವಿಶ್ಯೈವ ತದಂತರ್ಬಹಿರ್ವಾ ಭೋಗಾನ್ ಭುಂಜತೇ'**

**ಭಾವಾರ್ಥ:-** ದೇವತೆಗಳು ವಾಯುವಿನ ಮೂಲಕ ವಿಷ್ಣುವನ್ನು ಪ್ರವೇಶಿಸಿ ಭೋಗವನ್ನು ಅನುಭವಿಸುವರು.

## ಅವಿಭಾಗಾಧಿಕರಣ

### ॥ ಓಂ ಅವಿಭಾಗೋ ವಚನಾತ್ ಓಂ ॥ 4-2-16 ॥

ಭಗವಂತ ಹಾಗು ಮುಕ್ತರ ಇಚ್ಛೆಯ ವಿಷಯ ಒಂದೇ ಆಗಿರುತ್ತದೆ. 'ಕಾಮೇನ ಮೇ ಕಾಮ ಆಗಾತ್' ಎಂದು ಶ್ರುತಿಪ್ರಮಾಣವಿರುವುದರಿಂದ ಭಗವಂತನ ಇಚ್ಛಾನುಸಾರವಾಗಿ ಮುಕ್ತರ ಇಚ್ಛೆಯು ಇರುತ್ತದೆ.

**ಅಣುಭಾಷ್ಯ:- 'ವಿಷ್ಣುಂ ಪ್ರವಿಶ್ಯೈವ'**

**ಭಾವಾರ್ಥ:-** ಮುಕ್ತರು ವಿಷ್ಣುವಿನ ಅಧೀನರು. ವಿಷ್ಣುವನ್ನು ಅನುಸರಿಸಿಯೇ ಭೋಗವನ್ನು ಭೋಗಿಸುವರು. ಸ್ವತಂತ್ರವಾಗಿ ಭೋಗಿಸುವುದಿಲ್ಲ.

## ಹೃದಯಾಗ್ರಜ್ವಲನಾಧಿಕರಣ

### ॥ ಓಂ ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ ॥ 4-2-17 ॥

ಜ್ಞಾನಿಗಳ ಚರಮಮರಣವು ಅಜ್ಞಾನಿಯ ಮರಣದಂತೆ ಅಲ್ಲ. ಜ್ಞಾನಿಯ ಪ್ರಾಣೋತ್ಕ್ರಮಣಕಾಲದಲ್ಲಿ ವಿಷ್ಣುವಿನ ನಿವಾಸಸ್ಥಾನವಾದ ಹೃದಯದ ಅಗ್ರಪ್ರದೇಶದಲ್ಲಿ ಪ್ರಕಾಶವು ಉಂಟಾಗುತ್ತದೆ. ಆ ಪ್ರಕಾಶದಿಂದ ಬೆಳಗಿದ ನಾಡೀದ್ವಾರವನ್ನು ಹೊಂದಿ ಪ್ರಸನ್ನನಾದ ಭಗವಂತನ ಅನುಗ್ರಹದಿಂದ ಮಾರ್ಗಾನುಸ್ಮರಣ ಸಹಿತನಾಗಿ ಸುಷುಮ್ನಾನಾಡಿಯ ಮೂಲಕ ಉತ್ಕ್ರಮಣವನ್ನು ಮಾಡುವನು.

**ಅಣುಭಾಷ್ಯ:- 'ಉತ್ಕ್ರಮ್ಯ ಮಾನುಷಾ ಮುಕ್ತಿಂ ಯಾಂತಿ'**

**ಭಾವಾರ್ಥ:-** ಜ್ಞಾನಿಗಳಾದ ಮನುಷ್ಯರು ಬ್ರಹ್ಮನಾಡಿಯ ಮೂಲಕ ಹೊರಬಂದು ಮುಕ್ತಿಯನ್ನು ಹೊಂದುವರು. ಮುಕ್ತಿಗೆ ತೆರಳುವಾಗಲೇ ಈ ರೀತಿಯ ಉತ್ಕ್ರಮಣ ಎಂದು 'ಮುಕ್ತಿಂ ಯಾಂತಿ' ಎಂಬುದರಿಂದ ಸೂಚಿಸಿದ್ದಾರೆ.

## ಪ್ರತಿಸ್ಮರಣಾಧಿಕರಣ

**॥ ಓಂ ಯೋಗಿನಃ ಪ್ರತಿಸ್ಮರ್ಯೇತೇ ಸ್ಮಾರ್ತೇ ಚೈತೇ ಓಂ ॥ 4-2-22 ॥**

'ಅಗ್ನಿರ್ಜ್ಯೋತಿರಹಃ ಶುಕ್ಲಃ', 'ಧೂಮೋ ರಾತ್ರಿ.....' ಮುಂತಾದ ಸ್ಮೃತಿಗಳಲ್ಲಿ ಬ್ರಹ್ಮನನ್ನು ಕುರಿತು ಗಮನ ಹಾಗು ಚಂದ್ರನನ್ನು ಕುರಿತು ಗಮನಗಳು ಜ್ಞಾನಾದಿಗಳಿಂದ ಸಾಧ್ಯವೆಂದು ಹೇಳಲ್ಪಟ್ಟಿದೆ. 'ಅಗ್ನಿರ್ಜ್ಯೋತಿಃ' ಶ್ಲೋಕದಲ್ಲಿ 'ಬ್ರಹ್ಮವಿದಃ' ಎಂದು 'ಧೂಮೋ ರಾತ್ರಿಃ' ಎಂಬಶ್ಲೋಕದಲ್ಲಿ 'ಯೋಗೀ' ಎಂದು ವಿಶೇಷಣವಿದೆ. ಆದ್ದರಿಂದ ಕಾಲಾದಿಗಳಿಂದ ಹೊಂದಲ್ಪಡುವವುಗಳಲ್ಲ. 'ಗತ್ಯನುಸ್ಮರಣಾದ್ ಬ್ರಹ್ಮ ಚಂದ್ರಂ ವಾ ಗಚ್ಛತಿ ಧ್ರುವಮ್' ಎಂದು ಸ್ಮೃತಿ ಇರುವುದರಿಂದ ಬ್ರಹ್ಮಾದಿಪ್ರಾಪ್ತಿಗೆ ಜ್ಞಾನ ಮತ್ತು ಗತಿಯ ಸ್ಮರಣೆಯ ಆವಶ್ಯಕತೆ ಇದೆ ಎಂದು ತಿಳಿಯುತ್ತದೆ.

**ಅಣುಭಾಷ್ಯ:- 'ಉತ್ಕ್ರಮ್ಯ ಮಾನುಷಾ ಮುಕ್ತಿಂ ಯಾಂತಿ'**

**ಭಾವಾರ್ಥ:-** ಮಾನುಷಜ್ಞಾನಿಗಳು ಗತಿ ಸ್ಮರಣಪೂರ್ವಕವಾಗಿ ಬ್ರಹ್ಮನಾಡಿಯ ದ್ವಾರಾ ದೇಹದಿಂದ ಉತ್ಕ್ರಮಣವನ್ನು ಹೊಂದಿ ಮುಕ್ತಿಯನ್ನು ಹೊಂದುವರು.

**ಅಣುಭಾಷ್ಯ:- 'ದೇಹಕ್ಷಯಾತ್ ಸುರಾಃ'**

**ಭಾವಾರ್ಥ:-** ದೇವತೆಗಳಿಗೆ ದೇಹೋತ್ಕ್ರಮಣವಿಲ್ಲ. ಭೂಮಿಯಲ್ಲಿ ಅವತಾರಮಾಡಿದಾಗ ಮಾತ್ರ ಅವರಿಗೆ ಉತ್ಕ್ರಮಣವಿದೆ. ದೇವತೆಗಳು ಲಯಕ್ರಮದಿಂದ ಮುಕ್ತಿಯನ್ನು ಹೊಂದುವರು.

## ತೃತೀಯಪಾದ

# ಅರ್ಚಿರಾದ್ಯಧಿಕರಣ

### ॥ ಓಂ ಅರ್ಚಿರಾದಿನಾ ತತ್ ಪ್ರಥಿತೇಃ ಓಂ ॥ 4-3-1 ॥

ಪರಮಾತ್ಮನನ್ನು ಹೊಂದುವ ಜ್ಞಾನಿಯು ಶರೀರದ ಉತ್ಕ್ರಮಣವನ್ನು ಹೊಂದಿ ಅರ್ಚಿರಾದಿಮಾರ್ಗದಿಂದ ಹೋಗುವನು. 'ತೇಽರ್ಚಿಷಮಭಿಸಂವಿಶಂತಿ' ಎಂಬ ಶ್ರುತಿಯಲ್ಲಿ ಇದು ಪ್ರಸಿದ್ಧವಾಗಿದೆ.

# ವಾಯುಗತ್ಯಧಿಕರಣ

### ॥ ಓಂ ವಾಯುಶಬ್ದಾದವಿಶೇಷ ವಿಶೇಷಾಭ್ಯಾಮ್ ಓಂ ॥ 4-3-2 ॥

ಬ್ರಹ್ಮಜ್ಞಾನಿಯು ಅರ್ಚಿರ್‌ಲೋಕದಿಂದ ವಾಯುಲೋಕಕ್ಕೆ ತೆರಳುವನು. 'ಯದಾ ಹ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈ ್ಯತಿ ಸ ವಾಯುಮಾಗಚ್ಛತಿ' ಎಂಬ ಶ್ರುತಿಯಲ್ಲಿ ಸಾಮಾನ್ಯವಾಗಿ ವಾಯುಅಪ್ರಾಪ್ಯತ್ವವು ಹೇಳಲ್ಪಟ್ಟಿದೆ. 'ಅರ್ಚಿಷಃ ವಾಯುಂ ಗಚ್ಛತಿ' ಎಂದು ವಿಶೇಷವಚನವಿರುವುದರಿಂದ ಅರ್ಚಿರ್‌ದೇವತೆಯು ನಂತರ ವಾಯುವನ್ನು ಹೊಂದುತ್ತಾನೆಂದು ಅರ್ಥಮಾಡುವುದು ಸಮಂಜಸ ವಾಗಿದೆ. 'ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ' ಎಂದು ವಿಶೇಷಶ್ರುತಿಯೂ ಇದೆ.

# ತಟಿದಧಿಕರಣ

### ॥ ಓಂ ತಟಿತೋಽಧಿವರುಣಃ ಸಂಬಂಧಾತ್ ಓಂ ॥ 4-3-3 ॥

ಜ್ಞಾನಿಯು ಸಂವತ್ಸರಲೋಕದ ನಂತರ ತಟಿಲ್ಲೋಕವನ್ನು ಕುರಿತು ತೆರಳುತ್ತಾನೆ. ತಟಿಲ್ಲೋಕದ ನಂತರ ವರುಣಲೋಕವನ್ನು ಕುರಿತು ಹೋಗುತ್ತಾನೆ. ಏಕೆಂದರೆ :ತಟಿತಾ ಹಿ ಊಹ್ಯತೇ ವರುಣಲೋಕಃ' ಎಂಬ ಶ್ರುತಿಯಲ್ಲಿ ತಟಿಲ್ಲೋಕದ ಮೇಲೆ ವರುಣಲೋಕವು ಇದೆ ಎಂದು ಹೇಳಲ್ಪಟ್ಟಿದೆ. ಆದ್ದರಿಂದಲೇ 'ಸಂವತ್ಸರಾದ್ ವರುಣಲೋಕಂ' ಎಂಬುದಕ್ಕೆ ಸಂವತ್ಸರ ಲೋಕದಿಂದ ತಟಿಲ್ಲೋಕವನ್ನು ಹೊಂದಿ ವರುಣಲೋಕವನ್ನು ಹೊಂದುತ್ತಾನೆ ಎಂದು ಅಭಿಪ್ರಾಯ.

## ಆತಿವಾಹಿಕಾಧಿಕರಣ

### ॥ ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ ॥ 4-3-4 ॥

ಹಿಂದಿನ ಅಧಿಕರಣದಲ್ಲಿ ಪ್ರಸ್ತುತನಾದ ಜ್ಞಾನಿಯಿಂದ ಪ್ರಾಪ್ಯನಾದವನು ಆತಿವಾಹಿಕ ವಾಯು ಹೊರತು ಮುಖ್ಯವಾಯುವಲ್ಲ. ಅರ್ಚಿರ್‌ದೇವತೆಯ ನಂತರ ಪ್ರಾಪ್ಯನಾದವನು ಪೂರ್ವಪ್ರಾಪ್ಯನಾದ ವಾಯು. ಅವನೇ ಮುಖ್ಯವಾಯುವಾಗಲು ಸಾಧ್ಯವಿಲ್ಲ. 'ಉತ್ಕ್ರಾಂತೋ ವಿದ್ವಾನ್ ಪರಮಭಿಗಚ್ಛನ್ ವಿದ್ಯುತಮೇವಾಂತರ ಉಪಗಚ್ಛತಿ ದ್ಯೌರ್ವಾವ ವಿದ್ಯುತ್ । ತತ್ಪತಿಂ ವಾಯುಮುಪಗಮ್ಯ ತೇನೈವ ಬ್ರಹ್ಮ ಗಚ್ಛತೀತಿ' ಎಂಬ ಶ್ರುತಿಯಲ್ಲಿ ಮುಖ್ಯವಾಯುವಿಗೆ ಚರಮ ಪ್ರಾಪ್ಯತ್ವವು ಶ್ರುತವಾಗಿದೆ.

**ಅಣುಭಾಷ್ಯ:- 'ಅರ್ಚಿರಾದಿಪಥಾ ವಾಯುಮ್'**

**ಭಾವಾರ್ಥ:-** ದೇಹದಿಂದ ಉತ್ಕ್ರಮಣವನ್ನು ಹೊಂದಿದ ಮಾನುಷಜ್ಞಾನಿಗಳು ಅರ್ಚಿರಾದಿ ಮಾರ್ಗದಿಂದ ಹೋಗಿ ಮುಖ್ಯಪ್ರಾಣನನ್ನು ಹೊಂದುವರು. ಉತ್ತಮರಾದ ದೇವತೆಗಳು ಗಿರಿಜಾದೇವಿಯನ್ನು ಪ್ರವೇಶಿಸಿ ರುದ್ರ, ವಾಣೀ ಇವರ ಮೂಲಕ ಮುಖ್ಯಪ್ರಾಣನನ್ನು ಪ್ರವೇಶಿಸುವರು.

## ವೈದ್ಯುತಾಧಿಕರಣ

### ॥ ಓಂ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ ॥ 4-3-6 ॥

ಭಾರತೀರಮಣನಾದ ಮುಖ್ಯಪ್ರಾಣನೇ ಅಂತಿಮವಾಗಿ ಪ್ರಾಪ್ಯನಾದವನು. ಮುಖ್ಯಪ್ರಾಣನ ನಂತರ ಪರಮಾತ್ಮನ ಮೊದಲು ಮತ್ತೊಬ್ಬ ಪ್ರಾಪ್ಯರಾದವರಿಲ್ಲ. 'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯು ಮುಖ್ಯಪ್ರಾಣನೇ ಜ್ಞಾನಿಗಳನ್ನು ಬ್ರಹ್ಮನಲ್ಲಿಗೆ ಕರೆದೊಯ್ಯುವನು ಎನ್ನುತ್ತಿದೆ.

**ಅಣುಭಾಷ್ಯ:- 'ತೇನ ಜನಾರ್ದನಂ ಯಾಂತಿ'**

**ಭಾವಾರ್ಥ:-** ಮುಖ್ಯಪ್ರಾಣನ ಮೂಲಕ ಜ್ಞಾನಿಗಳು ಪರಬ್ರಹ್ಮನನ್ನು ಹೊಂದುವರು.

# ಕಾರ್ಯಾಧಿಕರಣ

## ॥ ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ ॥ 4-3-7 ॥

'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯಲ್ಲಿ ಬ್ರಹ್ಮನೆಂದರೆ ಚತುರ್ಮುಖಬ್ರಹ್ಮ ಎಮ್ದು ಅರ್ಥ. 'ಪ್ರಕೃತೇರ್ಬಂಧೋ ಬ್ರಹ್ಮಣಾ ಸಹ ಭಿದ್ಯತೇ' ಎಂದು ಶ್ರುತಿ ಇರುವುದರಿಂದ ಚತುರ್ಮುಖನ ಮುಕ್ತಿಪರ್ಯಂತವಾಗಿ ಜೀವರಿಗೆ ಬಂಧವಿರುವುದು. ಆದ್ದರಿಂದ ಚತುರ್ಮುಖನನ್ನು ಹೊಂದುವುದೇ ಸಮಂಜಸ ವೆಂಬ ಕಾರಣದಿಂದ ಬ್ರಹ್ಮಶಬ್ದವು ಪರಮಾತ್ಮನಲ್ಲಿ ಮುಖ್ಯವಾಗಿದ್ದರೂ ಚತುರ್ಮುಖಬ್ರಹ್ಮನೆಂದು ಅರ್ಥೈಸುವುದು ಯುಕ್ತವೇ ಆಗಿದೆ.

**ಅಣುಭಾಷ್ಯ:- 'ತೇನ ಜನಾರ್ದನಂ ಯಾಂತಿ ಉತ್ತಮಾ ನರೋಚ್ಚಾದ್ಯಾ ಬ್ರಹ್ಮಲೋಕಾತ್ ಸಹಾಮುನಾ'**

**ಭಾವಾರ್ಥ:-** ಮನುಷ್ಯೋತ್ತಮರು ಹಾಗು ಪ್ರತೀಕಾಲಂಬನರೂ ವಾಯು ದೇವರಿಂದ ಚತುರ್ಮುಖಬ್ರಹ್ಮದೇವರನ್ನು ಹೊಂದಿ ಅವರೊಂದಿಗೆ ಮುಕ್ತ ವೈಕುಂಥಸ್ಥಾನದಲ್ಲಿರುವ ಪರಮಾತ್ಮನನ್ನು ಹೊಂದುವರು. ಅಪ್ರತೀಕಾಲಂಬನರು ವಾಯುವಿನಿಂದ ಸಾಕ್ಷಾತ್ತಾಗಿಯೇ ಅಮುಕ್ತವೈಕುಂಠಸ್ಥಾನದಲ್ಲಿರುವ ಪರಮಾತ್ಮನನ್ನು ಪಡೆದು ಅನಂತರ ಬ್ರಹ್ಮದೇವರೊಂದಿಗೆ ಲಿಂಗಭಂಗವನ್ನು ಹೊಂದಿ ಮುಕ್ತವೈಕುಂಠಸ್ಥಾನದಲ್ಲಿರುವ ಪರಮಾತ್ಮನನ್ನು ಹೊಂದುವರು.

### ಚತುರ್ಥಪಾದ

ಚತುರ್ಮುಖನೊಂದಿಗೆ ಪರಮಾತ್ಮನನ್ನು ಹೊಂದಿದ ಜ್ಞಾನಿಗಳಿಗೆ ಭೋಗರೂಪವಾದ ಮೋಕ್ಷಸ್ವರೂಪವನ್ನು ನಿರೂಪಿಸುತ್ತಾರೆ.

# ಸಂಪದ್ಯಾಧಿಕರಣ

## ॥ ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ ॥ 4-4-1 ॥

ಜ್ಞಾನಿಯು ಪರಮಾತ್ಮನನ್ನು ಹೊಂದಿ ಅವನನ್ನು ಅತಿಕ್ರಮಿಸದೆ ತನ್ನ ಸ್ವರೂಪದಿಂದಲೇ ಇದ್ದು ಭೋಗಗಳನ್ನು ಅನುಭವಿಸುವನು. 'ಇಮಾಂ

ಘೋರಾಮಶಿವಾಂ ನದೀಂ ತೀರ್ತ್ವೈತಂ ಸೇತುಮ್ ಆಪ್ಯ...' ಎಂದು ಶ್ರುತಿ ಇರುವುದರಿಂದ, 'ಏತಂ ಸೇತುಂ ತೀರ್ತ್ವಾ' ಎಂಬ ಶ್ರುತಿಗೆ ಅಜ್ಞಾನಾದಿಗಳನ್ನು ದಾಟುತ್ತಾನೆ ಎಂದು ಅರ್ಥ ಹೊರತಾಗಿ ಪರಮಾತ್ಮನನ್ನು ದಾಟುತ್ತಾನೆ ಎಂದು ಅಭಿಪ್ರಾಯವಲ್ಲ.

**ಅಣುಭಾಷ್ಯ:- 'ಸಹಾಮುನಾ ಭೋಗಾನ್ ಭುಂಕ್ತೇ'**

**ಭಾವಾರ್ಥ:-** ಮುಕ್ತರಾದ ಮಾನುಷೋತ್ತಮಾದಿಗಳು ಅಮುನಾ ಸಹ = ಪರಮಾತ್ಮನೊಂದಿಗೆ ಪರಮಾತ್ಮನನ್ನು ಮೀರದೆ ಯಥೇಷ್ಟ ಭೋಗವನ್ನು ಭೋಗಿಸುವರು.

## ಮುಕ್ತಾಧಿಕರಣ

### II ಓಂ ಮುಕ್ತಃ ಪ್ರತಿಜ್ಞಾನಾತ್ ಓಂ II 4-4-2 II

'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾಽಜ್ಞಾತಿಭಿರ್ವಾ' ಎಂಬ ಶ್ರುತಿಯಲ್ಲಿ ಮುಕ್ತನ ಭೋಗವನ್ನೇ ಹೇಳಿರುವುದು. 'ಅಹರಹರೇನಮನುಪ್ರವಿಶತಿ ಉಪಸಂಕ್ರಮೇ ಚ । ನ ತತ್ರ ಮೋದತೇ ನ ಪ್ರಮೋದತೇ ನ ಕಾಮಾನನುಭವತಿ ಬದ್ಧೋ ಹ್ಯೇಷ ತದಾ ಭವತಿ' ಎಂಬ ಶ್ರುತಿಯು ಸುಪ್ತಿಯಲ್ಲಿ ಅಮುಕ್ತನಿಗೆ ಬ್ರಹ್ಮಪ್ರಾಪ್ತಿಯಿದ್ದರೂ ದಿವ್ಯಭೋಗ ಗಳಿಲ್ಲ ಎಂದು ಹೇಳಿ ಮುಕ್ತನಿಗೆ ಬ್ರಹ್ಮಪ್ರಾಪ್ತಿಯಿಂದ ದಿವ್ಯಭೋಗಗಳಿದೆ ಎಂದು ಹೇಳುತ್ತದೆ. ಮುಕ್ತನು ಕೃತಕೃತ್ಯನಾದರೂ ಆನಂದೋದ್ರೇಕದಿಂದ ಭೋಗವನ್ನು ಭಗವಂತನಂತೆ ಸ್ವೇಚ್ಛೆಯಿಂದಲೇ ಅನುಭವಿಸುವನು.

**ಅಣುಭಾಷ್ಯ:- 'ಚಿದಾನಂದಶರೀರಿಣಃ ಯಥಾಸಂಕಲ್ಪಭೋಗಾಶ್ಚ'**

**ಭಾವಾರ್ಥ:-** ಜ್ಞಾನಾನಂದಾತ್ಮಕಶರೀರವುಳ್ಳ ಮುಕ್ತರು ಯಥೇಷ್ಟಭೋಗ ವನ್ನು ಅನುಭವಿಸುವರು.

## ಆತ್ಮಾಧಿಕರಣ

### II ಓಂ ನಾತ್ಮಾ ಪ್ರಕರಣಾತ್ ಓಂ II 4-4-3 II

'ಪರಂ ಜ್ಯೋತಿರುಪಸಂಪದ್ಯ' ಎಂಬ ಶ್ರುತಿಯಲ್ಲಿರುವ ಜ್ಯೋತಿಶ್ಶಬ್ದವು ಪರಮಾತ್ಮನನ್ನೇ ಹೇಳುತ್ತದೆ. ಆದಿತ್ಯಾದಿಗಳನ್ನಲ್ಲ. 'ಯಃ ಆತ್ಮಾ ಅಪಹತಪಾಪ್ಮಾ' ಎಂದು ಅಪಹತಪಾಪ್ಮತ್ವಾದಿಗಳನ್ನು ಹೇಳಿರುವುದರಿಂದ ಇದು ವಿಷ್ಣುಪ್ರಕರಣ ವಾಗಿದೆ. ಆದ್ದರಿಂದ ಮುಕ್ತನು ಪರಮಾತ್ಮನನ್ನು ಹೊಂದಿ ಅವನನ್ನು ಬಿಡದೆ ಭೋಗಗಳನ್ನು ಅನುಭವಿಸುವನು.

**ಅಣುಭಾಷ್ಯ:-** ''ಅಮುನಾ ಸಹ'

**ಭಾವಾರ್ಥ:-** ಪರಂಜ್ಯೋತಿಶ್ಶಬ್ದವಾಚ್ಯನಾದ ಪರಬ್ರಹ್ಮನಿಂದ ಸಹಿತ ರಾಗಿಯೇ ಮುಕ್ತರು ಭೋಗವನ್ನು ಅನುಭವಿಸುವರು.

## ಅವಿಭಾಗಾಧಿಕರಣ

### ॥ ಓಂ ಅವಿಭಾಗೇನ ದೃಷ್ಟತ್ವಾತ್ ಓಂ ॥ 4-4-4 ॥

ಸಾಯುಜ್ಯಮುಕ್ತಿಯನ್ನು ಪಡೆದವರು ಭಗವಂತನಿಂದ ಭುಕ್ತವಾದ ಭೋಗಗಳನ್ನೇ ಅನುಭವಿಸುತ್ತಾರೆ. ಪ್ರತ್ಯೇಕವಾದ ಭೋಗವನ್ನು ಅನುಭವಿಸುವುದಿಲ್ಲ. 'ಯಾನೇವಾಹಂ ಶೃಣೋಮಿ ಯಾನ್ ಪಶ್ಯಾಮಿ ಯಾನ್ ಜಿಘ್ರಾಮಿ ತಾನೇವೈತ ಇದಂ ಶರೀರಂ ವಿವಿಚ್ಯಾನುಭವಂತಿ' ಎಂದು ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ.

**ಅಣುಭಾಷ್ಯ:-** 'ಅಮುನಾ ಸಹ ಯಥಾಸಂಕಲ್ಪಭೋಗಾಶ್ಚ'

**ಭಾವಾರ್ಥ:-** ಸಾಯುಜ್ಯಮೋಕ್ಷವನ್ನು ಹೊಂದಿದವರು ಅಮುನಾ ಸಹ = ವಿಭಾಗವಿಲ್ಲದೇ ಯಾವ ಭೋಗಗಳು ಪರಮಾತ್ಮನಿಂದ ಭೋಗಿಸಲ್ಪಡುತ್ತವೆಯೋ ಅವುಗಳಲ್ಲೇ ಕೆಲವನ್ನು ಭೋಗಿಸುವರು.

## ಚಿತಿಮಾತ್ರಾಧಿಕರಣ(ಬ್ರಾಹ್ಮಾಧಿಕರಣ)

### ॥ ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ ॥ 4-4-5 ॥

ಮುಕ್ತನಿಗೆ ದೇಹವಿಲ್ಲದಿರುವುದರಿಂದ ಭೋಗವೂ ಇಲ್ಲ ಎಂದು

ಆಶಂಕಿಸಬಾರದು. ಮುಕ್ತರಿಗೆ ತನ್ನದೇ ಆದ ದೇಹವಿಲ್ಲದಿದ್ದರೂ ಪರಮಾತ್ಮನನ್ನು ಪ್ರವೇಶಿಸಿದ ಮುಕ್ತನು ಪರಮಾತ್ಮನ ದೇಹದಿಂದಲೇ ಭೋಗಗಳನ್ನು ಅನುಭವಿಸುವನು. 'ಸ ವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮತಿಸೃಜ್ಯ ಬ್ರಹ್ಮಾಭಿಸಂಪದ್ಯ ಬ್ರಹ್ಮಣಾ ಪಶ್ಯತಿ ಬ್ರಹ್ಮಣಾ ಶೃಣೋತಿ ಬ್ರಹ್ಮೈವೇದಂ ಸರ್ವಮನುಭವತಿ' ಎಂದು ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ.

ಅಥವಾ ಮುಕ್ತರಿಗೆ ಚಿನ್ಮಾತ್ರದೇಹವು ಇದೆ. 'ಸರ್ವಾಂ ವಾ ಏತದಚಿತ್ ಪರಿತ್ಯಜ್ಯ ಚಿನ್ಮಾತ್ರ ಏವೈಷ ಭವತಿ ಚಿನ್ಮಾತ್ರ ಏವಾವತಿಷ್ಠತೇ ತಾಮೇತಾಂ ಮುಕ್ತಿರಿತ್ಯಾಚಕ್ಷತೇ' ಎಂಬ ಶ್ರುತಿಯು ಚಿನ್ಮಾತ್ರದೇಹವನ್ನು ಹೇಳುತ್ತಿದೆ. ಈ ಸ್ವರೂಪದೇಹದಿಂದ ಮುಕ್ತನು ಭೋಗವನ್ನು ಭೋಗಿಸುವನು.

**ಅಣುಭಾಷ್ಯ:- 'ಚಿದಾನಂದಶರೀರಿಣಃ'**

**ಭಾವಾರ್ಥ:-** ಜ್ಞಾನಾನಂದಾತ್ಮಕನಾದ ವಿಷ್ಣುವಿನ ಶರೀರವೇ ಮುಕ್ತರಿಗೂ ಶರೀರವಾಗಿದೆ. 'ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ಗಚ್ಛೇ ಚ ಹರಿಪಾದಾಭ್ಯಾಂ ಮುಕ್ತಸ್ಯೈಷಾ ಸ್ಥಿತಿರ್ಭವೇತ್' ಎಂದು ಸ್ಮೃತಿಗಳು ಬಣ್ಣಿಸುತ್ತಿವೆ. ಅಥವಾ ಸ್ವರೂಪಭೂತವಾದ ಜ್ಞಾನಾನಂದಾತ್ಮಕವಾದ ದೇಹದಿಂದಲೇ ಭೋಗವನ್ನು ಅನುಭವಿಸುವನು.

## ಸಂಕಲ್ಪಾಧಿಕರಣ

### ।। ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ ।। 4-4-8 ।।

ಮುಕ್ತರ ಭೋಗವು ಸಂಕಲ್ಪಮಾತ್ರದಿಂದಲೇ ಸಿದ್ಧಿಸುತ್ತದೆ. ಪ್ರಯತ್ನದ ಅಗತ್ಯವಿಲ್ಲ. 'ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತೇ' ಎಂಬ ಶ್ರುತಿಯು ಇದನ್ನು ತಿಳಿಸಿದೆ.

**ಅಣುಭಾಷ್ಯ:- 'ಯಥಾ ಸಂಕಲ್ಪಭೋಗಾಶ್ಚ'**

**ಭಾವಾರ್ಥ:-** ತಮ್ಮ ಕೇವಲ ಇಚ್ಛೆಯಿಂದ ಎಲ್ಲ ರೀತಿಯ ಭೋಗಗಳು ಮುಕ್ತರಿಗೆ ದೊರೆಯುವುದು.

## ಅನನ್ಯಾಧಿಪತಿತ್ವಾಧಿಕರಣ

### ॥ ಓಂ ಅತ ಏವ ಚಾನನ್ಯಾಧಿಪತಿಃ ಓಂ ॥ 4-4-9 ॥

ಮುಕ್ತರು ಕೇವಲ ತಮಗಿಂತ ಉತ್ತಮರಿಂದ ಮಾತ್ರ ನಿಯಮ್ಯರಾಗಿರುತ್ತಾರೆ; ಹೊರತಾಗಿ ಅಧಮರಿಂದ ನಿಯಮ್ಯರಾಗಿರುವುದಿಲ್ಲ. ಲೋಕದಲ್ಲಿ ತಮಗಿಂತ ಅಧಮರಿಂದ ನಿಯಮ್ಯತ್ವವನ್ನು ಯಾರೂ ಅಪೇಕ್ಷಿಸುವುದಿಲ್ಲ. ಮುಕ್ತರು ಸತ್ಯಸಂಕಲ್ಪರಾಗಿರುವುದರಿಂದಲೇ ಅಧಮರಿಂದ ನಿಯಮ್ಯರಲ್ಲ.

**ಅಣುಭಾಷ್ಯ:- 'ವಿನಾ ಸ್ವಾಭಾವಿಕೋತ್ತಮಾನ್ ಅನನ್ಯವಶಗಾಶ್ಚೈವ'**

**ಭಾವಾರ್ಥ:-** ಸ್ವಾಭಾವಿಕವಾಗಿಯೇ ತಮಗಿಂತ ಉತ್ತಮರಾದವರನ್ನು ಬಿಟ್ಟು ಇತರರಿಗೆ ಅಧೀನರಲ್ಲ. ಅಂದರೆ ಅಧಮರಿಗೆ ಅಧೀನರಲ್ಲ ಎಂದು ಅಭಿಪ್ರಾಯ.

## ಉಭಯವಿಧಭೋಗಾಧಿಕರಣ(ಅಭಾವಾಧಿಕರಣ)

### ॥ ಓಂ ಅಭಾವಂ ಬಾದರಿರಾಹ ಹ್ಯೇವಮ್ ಓಂ ॥ 4-4-10 ॥

ಬಾಹ್ಯವಾದ ದೇಹವಿಲ್ಲದಿದ್ದರೂ ಸ್ವರೂಪಭೂತವಾದ ದೇಹವಿರುವುದರಿಂದ ಮುಕ್ತರಿಗೆ ಭೋಗವು ಯುಕ್ತವಾಗಿದೆ. ಸುಪ್ತ್ಯವಸ್ಥೆಯಲ್ಲಿ ಚಿತ್‌ಸ್ವರೂಪವಿದ್ದರೂ ಅಜ್ಞಾನಾದ್ಯಾವೃತವಾಗಿರುವುದರಿಂದ ಭೋಗಾನುಭವವಿಲ್ಲ. 'ಚಿತಾ ವಾಽಚಿತಾ ವಾ ನಿತ್ಯೇನ ವಾಽನಿತ್ಯೇನ ವಾ ಅಥಾನಂದೀ ಹ್ಯೇವೈಷ ಭವತಿ' ಎಂದು ಶ್ರುತಿ ಹೇಳುವಂತೆ ಮುಕ್ತನು ಅಪ್ರಾಕೃತವಾದ ನಿತ್ಯ ದೇಹದಿಂದ ಭೋಗಿಸುವನು. ಹಾಗೆಯೇ ಕರ್ಮನಿಮಿತ್ತವಲ್ಲದ ಪ್ರಾಕೃತದೇಹದಿಂದಲೂ ಆನಂದವನ್ನು ಭೋಗಿಸುವನು.

**ಅಣುಭಾಷ್ಯ:- 'ದುಃಖಾದಿರಹಿತಾ ನಿತ್ಯಮ್'**

**ಭಾವಾರ್ಥ:-** ಮುಕ್ತರು ಶುದ್ಧಸತ್ವಾತ್ಮಕವಾದ ದೇಹದಿಂದ ಭೋಗವನ್ನು ಅನುಭವಿಸುವರು. ಕರ್ಮದಿಂದ ಆರಬ್ಧದೇಹವಾದಲ್ಲಿ ಮಾತ್ರ ದುಃಖಾನುಭವ; ಆದರೆ ಈ ದೇಹವು ಕರ್ಮಾರಬ್ಧವಲ್ಲವಾದ್ದರಿಂದ ದುಃಖದ ಸ್ಪರ್ಶವೇ ಇಲ್ಲ.

ಚಿದಾನಂದಶರೀರಿಣಃ = ಜ್ಞಾನಾನಂದಾತ್ಮಕವಾದ ಸ್ವರೂಪಭೂತದೇಹದಿಂದಲೂ ಸುಖವನ್ನು ಭೋಗಿಸುವರು.

## ಸರ್ವಕಾಮಾಧಿಕರಣ

### || ಓಂ ಜಗದ್ವ್ಯಾಪಾರವರ್ಜ್ಯಮ್ ಓಂ || 4-4-17 ||

ಜಗತ್ತಿನ ಸೃಷ್ಟ್ಯಾದಿವ್ಯಾಪಾರಗಳನ್ನು ಬಿಟ್ಟು ಉಳಿದ ಎಲ್ಲ ಕಾಮನೆಗಳನ್ನು ಮುಕ್ತರು ಪಡೆಯುವರು. 'ಸರ್ವಾನ್ ಕಾಮಾನ್ ಆಪ್ತ್ವಾಽಮೃತಃ' ಎಂಬ ಶ್ರುತಿಗೆ ಯೋಗ್ಯಕಾಮನೆಗಳನ್ನು ಹೊಂದುತ್ತಾನೆ ಎಂದೇ ಅಭಿಪ್ರಾಯ.

**ಅಣುಭಾಷ್ಯ:- 'ಜಗತ್ಸೃಷ್ಟ್ಯಾದಿವಿಷಯೇ ಮಹಾಸಾಮರ್ಥ್ಯಮಪ್ಯೃತೇ । ಯಥೇಷ್ಟಶಕ್ತಿಮಂತಶ್ಚ'**

**ಭಾವಾರ್ಥ:-** ಮುಕ್ತರು ತಮ್ಮ ಯೋಗ್ಯತೆಗನುಗುಣವಾಗಿ ಮೋಕ್ಷದಲ್ಲಿ ಸ್ವರೂಪಾನಂದವನ್ನು ಅನುಭವಿಸುವರು. ಅವರ ಯೋಗ್ಯತೆಯನ್ನು ಮೀರುವ ಇಚ್ಛೆಯೇ ಅವರಿಗೆ ಉಂಟಾಗುವುದಿಲ್ಲ. ಜಗತ್ತಿನ ಸೃಷ್ಟ್ಯಾದಿಗಳ ಸಾಮರ್ಥ್ಯವು ಅವರಿಗಿರುವುದಿಲ್ಲ. ಆದರ ಹೊರತಾಗಿ ಇತರ ಎಲ್ಲ ಕಾಮನೆಗಳೂ ಈಡೇರುತ್ತದೆ. ಕೇವಲ ಅವರ ಸಂಕಲ್ಪದಂತೆಯೇ ಭೋಗಗಳು ಮಾತ್ರವಲ್ಲ, ಯಥೇಷ್ಟಶಕ್ತಿಯುಳ್ಳವರೂ ಆಗಿರುತ್ತಾರೆ.

## (ಏಕರೂಪ)ಸ್ಥಿತ್ಯಧಿಕರಣ

### || ಓಂ ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ || 4-4-21 ||

'ಬ್ರಹ್ಮಣಿ ಸಂಪನ್ನೋ ನ ಜಾಯತೇ ನ ಮ್ರಿಯತೇ ನ ಹೀಯತೇ ನ ವರ್ಧತೇ' ಎಂದು ಶ್ರುತಿಯು ಮುಕ್ತರ ಆನಂದಾದಿಗಳಿಗೆ ವೃದ್ಧಿಹ್ರಾಸವಿಲ್ಲ, ಅದು ಏಕರೂಪವಾದದ್ದು ಎಂದು ಪ್ರತಿಪಾದಿಸುತ್ತದೆ. ವೃಧ್ಯಾದಿಗಳ ಅಭಾವವನ್ನು ಗ್ರಹಿಸುವ ಮಹಾತ್ಮರ ಪ್ರತ್ಯಕ್ಷವಿದೆ. ವೃದ್ಧಿಹ್ರಾಸಗಳಿಗೆ ಕಾರಣವಿಲ್ಲವಾದ್ದರಿಂದ ವೃದ್ಧಿಹ್ರಾಸಗಳಿಲ್ಲ ಎಂಬ ಯುಕ್ತಿಯೂ ಇದೆ.

**ಅಣುಭಾಷ್ಯ:- 'ವೃದ್ಧಿಹ್ರಾಸವಿವರ್ಜಿತಾಃ'**

**ಭಾವಾರ್ಥ:-** ಮುಕ್ತರ ಜ್ಞಾನಾನಂದಾದಿಗಳು ವೃದ್ಧಿಹ್ರಾಸರಹಿತ. ವೃದ್ಧಿಹ್ರಾಸಗಳಾಗಲು ಬೇಕಾದ ಕಾರಣವೇ ಅಲ್ಲಿ ಇಲ್ಲ. ಮೋಕ್ಷದಲ್ಲಿ ಮಾಡುವ ಭಗವಂತನ ಉಪಾಸನೆಯೂ ಸುಖಸ್ವರೂಪವೇ ಆಗಿರುತ್ತದೆ.

## ಅನಾವೃತ್ತ್ಯಧಿಕರಣ

**॥ ಓಂ ಅನಾವೃತ್ತಿಶ್ಶಬ್ದಾತ್ ಅನಾವೃತ್ತಿಶ್ಶಬ್ದಾತ್ ಓಂ ॥ 4-4-23 ॥**

'ನ ಚ ಪುನರಾವರ್ತತೇ' ಎಂದು ಶ್ರುತಿಯಿರುವುದರಿಂದ ಸ್ವರ್ಗಿಯು ಹಿಂತಿರುಗಿ ಬರುವಂತೆ ಮುಕ್ತನು ಮೋಕ್ಷದಿಂದ ಹಿಂತಿರುಗುವುದಿಲ್ಲ.

**ಅಣುಭಾಷ್ಯ:- 'ದುಃಖಾದಿರಹಿತಾ ನಿತ್ಯಂ ಮೋದಂತೇಽವಿರತಂ ಸುಖಮ್'**

**ಭಾವಾರ್ಥ:-** ದುಃಖಾಜ್ಞಾನಾದಿಗಳಿಂದ ರಹಿತರಾಗಿ ಅವಿಚ್ಛಿನ್ನವಾದ ಸ್ವರೂಪಾನಂದವನ್ನು ಪುನರಾವೃತ್ತಿರಹಿತರಾಗಿ ಅನುಭವಿಸುವರು.

**ಅಣುಭಾಷ್ಯ:- 'ಪೂರ್ಣಪ್ರಜ್ಞೇನ ಮುನಿನಾ ಸರ್ವಶಾಸ್ತ್ರಾರ್ಥಸಂಗ್ರಹಃ ।**
**ಕೃತೋಽಯಂ ಪ್ರೀಯತಾಂ ತೇನ ಪರಮಾತ್ಮಾ ರಮಾಪತಿಃ' ॥**

**ಭಾವಾರ್ಥ:-** ಮುನಿಗಳಾದ ಪೂರ್ಣಪ್ರಜ್ಞರಿಂದ ರಚಿತವಾದ ಸಮಸ್ತ ಶಾಸ್ತ್ರಗಳ ಅರ್ಥದ ಸಂಗ್ರಹರೂಪವಾದ ಈ ಕೃತಿಯಿಂದ ಲಕ್ಷ್ಮೀದೇವಿಯ ಪತಿಯಾದ ನಾರಾಯಣನು ಸಂತುಷ್ಟನಾಗಲಿ.

**ಅಣುಭಾಷ್ಯ: 'ನಮೋನಮೋಽಶೇಷದೋಷದೂರಪೂರ್ಣಗುಣಾತ್ಮನೇ ।**
**ವಿರಿಂಚಶರ್ವಪೂರ್ವೇಡ್ಯವಂದ್ಯಾಯ ಶ್ರೀವರಾಯ ತೇ' ॥**

**॥ ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಾಣುಭಾಷ್ಯೇ**
**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**
**ಚತುರ್ಥೋಽಧ್ಯಾಯಃ ॥**

## ॥ ಸಮಾಪ್ತಶ್ಚಾಯಂ ಗ್ರಂಥಃ ॥

**ಭಾವಾರ್ಥ:-** ಸಮಸ್ತದೋಷಗಳಿಂದ ರಹಿತನಾದ ಪೂರ್ಣವಾದ ಗುಣಗಳ ಸ್ವರೂಪನಾದ ಬ್ರಹ್ಮ, ರುದ್ರರೇ ಮೊದಲಾದ ದೇವತೆಗಳಿಂದ ವಂದ್ಯನಾದ ಲಕ್ಷ್ಮೀಪತಿಯಾದ ನಾರಾಯಣನಿಗೆ ಭಕ್ತಿಪೂರ್ವಕವಾದ ವಂದನೆಗಳು.

## ॥ ಶ್ರೀಕೃಷ್ಣಾರ್ಪಣಮಸ್ತು ॥

# ॥ ಶ್ರೀಮದಣುಭಾಷ್ಯಮ್ ॥

# (ಭಾವಾರ್ಥಸಂಗ್ರಹ)

## ಪ್ರಥಮೋಽಧ್ಯಾಯಃ

**ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಮ್ ।**
**ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥ ೧ ॥**

**ಭಾವಾರ್ಥ:-** ಜ್ಞಾನ ಆನಂದ ಮುಂತಾದ ಸಮಸ್ತಗುಣಗಳಿಂದ ಪರಿಪೂರ್ಣನು ಅಜ್ಞಾನ, ಚಿಂತಾ, ಸಂತಾಪ ಮುಂತಾದ ದೋಷಗಳಿಂದ ರಹಿತನೂ ಆದ, ಶ್ರವಣ ಮನನ ನಿಧಿಧ್ಯಾಸನಗಳಿಂದ ತಿಳಿಯಲು ಯೋಗ್ಯನಾದ, ಹೊಂದಲು ಯೋಗ್ಯನಾದ ನಾರಾಯಣನನ್ನು ನಮಸ್ಕರಿಸಿ ನಾರಾಯಣನಿಂದ ಅಭಿನ್ನರಾದ ಗುರುಗಳನ್ನೂ ನಮಸ್ಕರಿಸಿ ಸೂತ್ರದ ಅರ್ಥವನ್ನು ಹೇಳುತ್ತಿದ್ದೇನೆ.

**ವಿಷ್ಣುರೇವ ವಿಜಿಜ್ಞಾಸ್ಯಃ ಸರ್ವಕರ್ತಾಽಽಗಮೋದಿತಃ ।**
**ಸಮನ್ವಯಾದೀಕ್ಷತೇಶ್ಚ ಪೂರ್ಣಾನಂದೋಂಽತರಃ ಖವತ್ ॥ ೨ ॥**

**ಭಾವಾರ್ಥ:-** ದೇಶ-ಕಾಲ-ಗುಣಗಳಿಂದ ಅಪರಿಮಿತನಾದ ವಿಷ್ಣುವಿನ ವಿಚಾರವನ್ನು ಮೋಕ್ಷಾಪೇಕ್ಷಿಗಳೆಲ್ಲರೂ ಮಾಡುವುದು ಆವಶ್ಯಕವಾಗಿದೆ. ಚೇತನಾಚೇತನಾತ್ಮಕವಾದ ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಇವೆಲ್ಲವುಗಳ ಕರ್ತೃ ವಿಷ್ಣುವೇ ಆಗಿದ್ದಾನೆ.

ಋಗಾದಿವೇದಗಳು, ಮಹಾಭಾರತ, ಪಂಚರಾತ್ರ, ಮೂಲರಾಮಾಯಣ, ಪುರಾಣಗಳು ಇವೆಲ್ಲವೂ ಶಾಸ್ತ್ರ ಎನಿಸಿವೆ. ಇವೆಲ್ಲದರಿಂದಲೂ ವಿಷ್ಣುವೇ ಸರ್ವಕರ್ತಾ ಎಂದು ಪ್ರತಿಪಾದ್ಯನಾಗಿದ್ದಾನೆ. ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ ಇವೆಲ್ಲವೂ ವಾಕ್ಯದ

ತಾತ್ಪರ್ಯವನ್ನು ನಿರ್ಣಯಮಾಡುವ ಲಿಂಗಗಳು. ಇವುಗಳ ಸಹಾಯದಿಂದ ವಿಚಾರ ಮಾಡಿದಾಗ ಮುಖ್ಯವೃತ್ತಿಯಿಂದ ವಿಷ್ಣುವೇ ಶಾಸ್ತ್ರ ಪ್ರತಿಪಾದ್ಯ ಎಂದು ಸಿದ್ಧವಾಗುತ್ತದೆ. ಅವನನ್ನು ಶಾಸ್ತ್ರದಿಂದ ಮಾತ್ರ ತಿಳಿಯಲು ಸಾಧ್ಯ. ಅವನು ಜ್ಞಾನವಿಷಯನಾದುದರಿಂದ ಹಾಗು ಶ್ರುತಿ ಸ್ಮೃತಿಗಳಿಂದಲೂ ಅವನಿಗೆ ವಾಚ್ಯತ್ವವು ಸಿದ್ಧವಾಗುತ್ತದೆ. ಪರಿಪೂರ್ಣಾನಂದನು ವಿಷ್ಣುವೇ ಆಗಿದ್ದಾನೆ. ಆದ್ದರಿಂದ ಆನಂದಮಯ ಶಬ್ದವಾಚ್ಯನು ವಿಷ್ಣು. ಆನಂದಮಯಶಬ್ದದಿಂದ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಶಬ್ದಗಳನ್ನು ತೆಗೆದುಕೊಳ್ಳಬೇಕು. ಆ ಶಬ್ದಗಳಿಂದಲೂ ವಿಷ್ಣು ವಾಚ್ಯನಾಗಿದ್ದಾನೆ. ವಿಷ್ಣುವು ಆಕಾಶದಂತೆ ಅವಕಾಶವುಳ್ಳವನು. ಆದ್ದರಿಂದ ಆಕಾಶಪದವಾಚ್ಯನೂ ಆಗಿದ್ದಾನೆ.

**ಪ್ರಣೇತಾ ಜ್ಯೋತಿರಿತ್ಯಾದ್ಯೈಃ ಪ್ರಸಿದ್ಧೈರನ್ಯವಸ್ತುಷು ।**
**ಉಚ್ಯತೇ ವಿಷ್ಣುರೇವೈಕಃ ಸರ್ವೈಃ ಸರ್ವಗುಣತ್ವತಃ ॥ ೩ ॥**

**ಭಾವಾರ್ಥ:-** ಜೀವನಪ್ರದನು ವಿಷ್ಣುವೇ ಆಗಿದ್ದಾನೆ. ಆದ್ದರಿಂದ ಪ್ರಾಣಪದವಾಚ್ಯನು ಅವನೇ. ಇತರ ವಸ್ತುಗಳಲ್ಲಿ ಪ್ರಸಿದ್ಧವಾದ ಜ್ಯೋತಿಷ್ ಮುಂತಾದ ಶಬ್ದಗಳಿಂದ ವಿಷ್ಣುವೇ ವಾಚ್ಯನಾಗಿದ್ದಾನೆ. ಆ ಶಬ್ದಗಳ ಪ್ರವೃತ್ತಿನಿಮಿತ್ತವಾದ ಧರ್ಮಗಳು ವಿಷ್ಣುವಿನಲ್ಲಿವೆ.

**ಸರ್ವಗೋಽತ್ತಾ ನಿಯಂತಾ ಚ ದೃಶ್ಯತ್ವಾದ್ಯುಜ್ಝಿತಃ ಸದಾ ।**
**ವಿಶ್ವಜೀವಾಂತರತ್ವಾದ್ಯೈರ್ಲಿಂಗೈಃ ಸರ್ವೈರ್ಯುತಃ ಸ ಹಿ ॥ ೪ ॥**

**ಭಾವಾರ್ಥ:-** ಚೇತನಾಚೇತನಾತ್ಮಕವಾದ ಜಗತ್ತಿನಲ್ಲಿ ವ್ಯಾಪ್ತನಾಗಿದ್ದಾನೆ ವಿಷ್ಣು. ಜನ್ಮಾದ್ಯಧಿಕರಣದಲ್ಲಿ ಹೇಳಲ್ಪಟ್ಟ ವಿಷ್ಣುವೇ ಸರ್ವಸಂಹಾರಕನೂ ಆಗಿದ್ದಾನೆ. ಅವನೇ ಎಲ್ಲರ ಹೃದಯಗುಹಾದಲ್ಲಿ ನೆಲಸಿ ಶುಭಫಲವನ್ನು ಭೋಗಿಸುತ್ತಿದ್ದಾನೆ. ಎಲ್ಲರ ಒಳಗಿದ್ದು ನಿಯಮನೆಗಳನ್ನು ಅವನೇ ಮಾಡುತ್ತಿದ್ದಾನೆ. ಅದೃಶ್ಯತ್ವಾದಿ ಧರ್ಮವುಳ್ಳವನು, ಸಮಗ್ರವಾಗಿ ತಿಳಿಯಲು ಅಶಕ್ಯನು, ಸಮಸ್ತಜೀವರಾಶಿಗಳ ಒಳಗೆ ಇರುವವನು ವಿಷ್ಣುವೇ ಆಗಿದ್ದಾನೆ. ಹೀಗೆ ವಿಶ್ವಜೀವಾಂತರತ್ವ, ಪಾಚಕತ್ವ ಮೊದಲಾದ ಲಿಂಗಗಳಿರುವುದರಿಂದ ವಿಷ್ಣುವೇ ವೈಶ್ವಾನರಶಬ್ದವಾಚ್ಯನಾಗಿದ್ದಾನೆ.

**ಸರ್ವಾಶ್ರಯಃ ಪೂರ್ಣಗುಣಃ ಸೋಽಕ್ಷರಃ ಸನ್ ಹೃದಬ್ಜಗಃ ।**
**ಸೂರ್ಯಾದಿಭಾಸಕಃ ಪ್ರಾಣಪ್ರೇರಕೋ ದೈವತೈರಪಿ ॥ ೫ ॥**

**ಭಾವಾರ್ಥ:-** ದೇವಲೋಕ, ಭೂಲೋಕ ಮೊದಲಾದ ಎಲ್ಲ ಲೋಕಗಳಿಗೆ ಆಧಾರನಾಗಿದ್ದಾನೆ. ಪರಿಪೂರ್ಣವಾದ ಗುಣಗಳುಳ್ಳವನು. ಸತ್ ಶಬ್ದದಿಂದ ವಾಚ್ಯನಾಗಿದ್ದಾನೆ. ನಾಶರಹಿತನೂ ಆಗಿದ್ದಾನೆ. ಹೃದಯದ ದಹರಾಕಾಶದಲ್ಲಿ ನೆಲೆಸಿದ್ದಾನೆ. ಅನಿರ್ದೇಶ್ಯಪರಮಸುಖರೂಪನಾಗಿದ್ದಾನೆ. ಆದ್ದರಿಂದಲೇ ಸೂರ್ಯ, ಚಂದ್ರ, ಅಗ್ನಿ ಮುಂತಾದವರನ್ನು ಪ್ರಕಾಶಿಸುವಂತೆ ಮಾಡುತ್ತಿದ್ದಾನೆ. ಪ್ರೇರಕನಾಗಿ ಎಲ್ಲ ಕಡೆಯಲ್ಲೂ ಇರುವುದರಿಂದ ಪ್ರಾಣಶಬ್ದವಾಚ್ಯನಾಗಿದ್ದಾನೆ.

**ದೈವತೈರಪಿ ವೇದ್ಯೈಃ ಜ್ಞೇಯಃ**

**ಭಾವಾರ್ಥ:-** ದೇವತೆಗಳು ಅನಾದಿನಿತ್ಯರಲ್ಲ. ಪ್ರವಾಹತಃ ದೇವತೆಗಳು ನಿತ್ಯದಲ್ಲೂ ಇರುತ್ತಾರೆ. ಆದ್ದರಿಂದ ಕರ್ಮಲೋಪವಿಲ್ಲ. ವೇದಾಪ್ರಾಮಾಣ್ಯವಿಲ್ಲ. ಮೋಕ್ಷಾಪೇಕ್ಷಿಗಳಾಗಿ ದೇವತೆಗಳು ನಿತ್ಯದಲ್ಲೂ ಉಪಾಸನೆಯನ್ನು ಮಾಡುತ್ತಾರೆ. ಆದ್ದರಿಂದ ಸರ್ವದೇವೋಪಾಸ್ಯತ್ವವು ವಿಷ್ಣುವಿನಲ್ಲಿ ಸಂಗತವಾಗಿದೆ.

**ಶೂದ್ರಾದ್ಯೈಃ ವೇದ್ಯೈಃ ನ ಜ್ಞೇಯಃ**

**ಭಾವಾರ್ಥ:-** ಉಪನಯನ ಸಂಸ್ಕಾರವಿಲ್ಲದ ಶೂದ್ರರಿಗೂ ಸ್ತ್ರೀಯರಿಗೂ ವೇದಾಧಿಕಾರವಿಲ್ಲ. ಉತ್ತಮಸ್ತ್ರೀಯರಿಗೆ ವೇದಾಧಿಕಾರವಿದೆ. ಆದರೆ ಸ್ತ್ರೀ-ಶೂದ್ರರೂ ಅವಶ್ಯವಾಗಿ ಪರಮಾತ್ಮನ ಜ್ಞಾನವನ್ನು ಸಂಪಾದಿಸಬೇಕು.

**ಕಂಪಕಃ**

**ಭಾವಾರ್ಥ:-** 'ಆಯುಧಾನಾಮಹಂ ವಜ್ರಃ' ಎಂದು ಪ್ರಮಾಣವಾಕ್ಯಗಳಿರುವುದರಿಂದ ವಜ್ರಪದವಾಚ್ಯನು ವಿಷ್ಣುವೇ ಆಗಿದ್ದಾನೆ. ಜೀವರು ಎಲ್ಲ ಲೋಕಗಳಲ್ಲಿ ಸಂಚರಿಸಲು ವಿಷ್ಣುವೇ ಕಾರಣ. ಆದ್ದರಿಂದ ಅವನೇ ಕಂಪಕ.

**ಅನ್ಯಶ್ಚ ಜೀವತಃ**

**ಭಾವಾರ್ಥ:-** 'ನಾಮರೂಪೇ ವಿಹಾಯ' ಎಂದು ಶ್ರುತಿಯು

ನಾಮರೂಪರಹಿತನು ಎಂದು ಆಕಾಶವನ್ನು ವರ್ಣಿಸಿದೆ. ಈ ಆಕಾಶ ವಿಷ್ಣುವೇ. ಅವನೇ ವಿಲಕ್ಷಣ. ಅವನು ಜೀವನಿಂದ ಭಿನ್ನನಾಗಿದ್ದಾನೆ. ಅವನೇ ಅಸಂಗ.

**ಪತಿತ್ವಾದಿಗುಣೈಃ ಯುಕ್ತಃ**

**ಭಾವಾರ್ಥ:-** ಸರ್ವಾಧಿಪತಿತ್ವ ಮುಂತಾದ ಧರ್ಮಗಳು ವಿಷ್ಣುವಿನ ಧರ್ಮಗಳಾಗಿವೆ. ಆದ್ದರಿಂದ ಬ್ರಾಹ್ಮಣಶಬ್ದ ವಾಚ್ಯನು ವಿಷ್ಣುವೇ ಆಗಿದ್ದಾನೆ.

**ತದನ್ಯತ್ರ ಚ ವಾಚಕೈಃ । ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ**

**ಭಾವಾರ್ಥ:-** ಉಭಯತ್ರ ಪ್ರಸಿದ್ಧವಾದ ನಾಮಾತ್ಮಕ ಹಾಗು ಲಿಂಗಾತ್ಮಕ ಶಬ್ದಗಳೆಲ್ಲವೂ ವಿಷ್ಣುವನ್ನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದಿಸುತ್ತಿವೆ.

**ಅವ್ಯಕ್ತಃ ಕರ್ಮವಾಕ್ಯೈಶ್ಚ (ವಾಚ್ಯೈಶ್ಚ)ವಾಚ್ಯ ಏಕೋಽಮಿತಾತ್ಮಕಃ**

**ಭಾವಾರ್ಥ:-** ಪರಮಾತ್ಮನು ಬಹುಸೂಕ್ಷ್ಮರೂಪನಾಗಿದ್ದಾನೆ. ಆದ್ದರಿಂದ ಅವ್ಯಕ್ತ. ದುಃಖಿತ್ವ, ಬದ್ಧತ್ವ ಇವೇ ಮುಂತಾದ ಧರ್ಮಗಳು ಶ್ರೀಹರಿಯಲ್ಲಿ ಇಲ್ಲ. ಆದರೆ ಜೀವ್ರಲ್ಲಿರುವ ಆ ಧರ್ಮಗಳು ವಿಷ್ಣುವಿನ ಅಧೀನವಾಗಿವೆ. ಆದ್ದರಿಂದ ದುಃಖಿ, ಬದ್ಧ ಇತ್ಯಾದಿ ಶಬ್ದಗಳಿಂದ ವಿಷ್ಣುವು ವಾಚ್ಯನಾಗಿದ್ದಾನೆ.

ಕರ್ಮಪ್ರತಿಪಾದಕವಾದ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಮುಂತಾದ ವಾಕ್ಯಗಳಿಂದಲೂ ಅವನೇ ಪ್ರತಿಪಾದ್ಯನಾಗಿದ್ದಾನೆ. ಅನ್ಯತ್ರಪ್ರಸಿದ್ಧವಾದ ಈ ವಾಕ್ಯ, ಪದಗಳೂ ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನು ಹೇಳುತ್ತಿದ್ದು ಮುಖ್ಯವೃತ್ತಿಯಿಂದ ಕರ್ಮಾದಿಗಳನ್ನು ಹೇಳುತ್ತಿವೆ. ಆದ್ದರಿಂದ ಕರ್ಮಾದಿಗಳ ಆಚರಣೆಗೆ ಭಂಗವಿಲ್ಲ. ಪರಮಾತ್ಮನ ರೂಪಗಳಿಗೆ ಆಧಾರ ಆಧೇಯಭಾವವನ್ನು ಶ್ರುತಿಯು ಪ್ರತಿಪಾದಿಸಿದೆ 'ಯಸ್ಮಿನ್ ಪಂಚ ಪಂಚ ಜನಾಃ.....' ಎಂಬ ಶ್ರುತಿಯಲ್ಲಿ ಪಂಚ ಜನಾಃ ಎಂದು ಹೇಳಲ್ಪಟ್ಟಿರುವುದು ವಿಷ್ಣುವಿನ ರೂಪಗಳೇ ಆಗಿವೆ.

**ಅವಾಂತರಂ ಕಾರಣಂ ಚ ಪ್ರಕೃತಿಃ ಶೂನ್ಯಮೇವ ಚ ।**
**ಇತ್ಯಾದ್ಯನ್ಯತ್ರ ನಿಯತೈರಪಿ ಮುಖ್ಯತಯೋದಿತಃ ।**

**ಶಬ್ದೈರತೋಽನಂತಗುಣೋ ಯಚ್ಛಬ್ದಾ ಯೋಗವೃತ್ತಯಃ ||**

**ಭಾವಾರ್ಥ:-** ಆಕಾಶವೇ ಮೊದಲಾದ ಎಲ್ಲ ವಸ್ತುಗಳಲ್ಲಿಯೂ ಪರಮಾತ್ಮನು ಕಾರ್ಯರೂಪನಾಗಿಯೂ ಕಾರಣರೂಪನಾಗಿಯೂ ಇದ್ದಾನೆ. ಆದ್ದರಿಂದ ಅವಾಂತರಕಾರಣನೂ ಆಗಿದ್ದಾನೆ. ಪ್ರಕೃಷ್ಟವಾದ ಕೃತಿಯುಳ್ಳವನು ಪರಮಾತ್ಮ ಆದ್ದರಿಂದ ಪ್ರಕೃತಿ ಶಬ್ದವಾಚ್ಯನಾಗಿದ್ದಾನೆ. ಪ್ರಕೃತಿ ಎಂದರೆ ಇಚ್ಛೆ ಎಂದೂ ಅರ್ಥವಿದೆ. ಇಚ್ಛೆಯು ಪರಮಾತ್ಮನ ಸ್ವರೂಪವಾಗಿದೆ. ಆದ್ದರಿಂದ ಪ್ರಕೃತಿಶಬ್ದವಾಚ್ಯನಾಗಿದ್ದಾನೆ. ಪ್ರಕೃತಿ ಮುಂತಾದ ಸ್ತ್ರೀಲಿಂಗ ಶಬ್ದಗಳಿಂದ ವಾಚ್ಯನಾಗಿದ್ದಾನೆ. ಮತ್ತೊಬ್ಬರ ಸುಖವೂ ಊನವಾಗುವಂತೆ ಮಾಡುತ್ತಾನೆ. ಆದ್ದರಿಂದ ಶೂನ್ಯಶಬ್ದವಾಚ್ಯನಾಗಿದ್ದಾನೆ. ಅಸತ್, ತುಚ್ಛ ಮುಂತಾದ ಶಬ್ದಗಳ ಪ್ರವೃತ್ತಿನಿಮಿತ್ತವು ಶ್ರೀಹರಿಯ ಅಧೀನವಾಗಿದೆ. ಆದ್ದರಿಂದ ಆ ಶಬ್ದಗಳಿಂದಲೂ ಶ್ರೀಹರಿಯು ವಾಚ್ಯನಾಗಿದ್ದಾನೆ.

ಹೀಗೆ ಪರಮಾತ್ಮನು ನಾಮಾತ್ಮಕ, ಲಿಂಗಾತ್ಮಕ ಎಂಬ ಪ್ರಭೇದವುಳ್ಳ ಅನ್ಯತ್ರ, ಉಭಯತ್ರ, ಅನ್ಯತ್ರೈವ ಪ್ರಸಿದ್ಧವಾದ ಎಲ್ಲ ಶಬ್ದಗಳಿಂದಲೂ ವಾಚ್ಯನಾಗಿದ್ದಾನೆ. ಎಲ್ಲ ಶಬ್ದಗಳೂ ಯೌಗಿಕವಾಗಿವೆ. ಅವಯವಾರ್ಥಸಂಬಂಧದಿಂದ ಪರಮಾತ್ಮನ ಗುಣಗಳನ್ನು ಆಯಾಯ ಶಬ್ದಗಳು ತಿಳಿಸುತ್ತವೆ. ಹೀಗೆ ಸರ್ವಶಬ್ದವಾಚ್ಯ ನಾಗಿರುವುದರಿಂದ ಅನಂತಗುಣಗಳಿಂದ ಪರಿಪೂರ್ಣನೆಂದು ಸಿದ್ಧವಾಗುತ್ತದೆ.

**|| ಇತಿ ಪ್ರಥಮೋಽಧ್ಯಾಯಃ ||**

# ದ್ವಿತೀಯೋಽಧ್ಯಾಯಃ

**ಶ್ರೌತಸ್ಮೃತಿವಿರುದ್ಧತ್ವಾತ್ ಸ್ಮೃತಯೋ ನ ಗುಣಾನ್ ಹರೇಃ |**
**ನಿಷೇದ್ಧುಂ ಶಕ್ನುಯುರ್ವೇದಾ ನಿತ್ಯತ್ವಾನ್ಮಾನಮುತ್ತಮಮ್ ||**

**ಭಾವಾರ್ಥ:-** ಶ್ರುತಿಯ ಸಂವಾದವು ಪಂಚರಾತ್ರಾದಿ ವೈಷ್ಣವ ಸ್ಮೃತಿಗಳಿಗಿದೆ. ಪಾಶುಪತಾದಿಸ್ಮೃತಿಗಳಿಗೆ ಶ್ರುತಿಸಂವಾದವಿಲ್ಲ. ಫಲವ್ಯಭಿಚಾರವೂ

ಕಂಡಿದೆ. ಆದ್ದರಿಂದ ಅವುಗಳು ಅಪ್ರಮಾಣ. ಭಗವಂತನಲ್ಲಿ ಗುಣಗಳೇ ಇಲ್ಲ ಎಂದು ಶ್ರೀಹರಿಯ ಗುಣಗಳನ್ನು ನಿಷೇಧಿಸಲು ಅವುಗಳಿಗೆ ಸಾಮರ್ಥ್ಯವಿಲ್ಲ. ವೇದಗಳು ಪುರುಷನಿರ್ಮಿತವಲ್ಲ ಅವುಗಳು ನಿತ್ಯ. ಪುರುಷದೋಷನಿಮಿತ್ತ ದೋಷಗಳಿಲ್ಲ. ಆದ್ದರಿಂದ ವೇದಗಳು ಪರಮಪ್ರಮಾಣ.

**ದೇವತಾವಚನಾನ್ನಾಪೋ ವದಂತೀತ್ಯಾದಿನಾ ವಚಃ ।**
**ನಾಯುಕ್ತವಾದ್ಯಸನ್ನೈವ ಕಾರಣಂ ದೃಶ್ಯತೇ ಕ್ವಚಿತ್ ॥**

**ಭಾವಾರ್ಥ:-** ಮಣ್ಣೂ ಮಾತನಾಡಿತು, ನೀರು ಮಾತನಾಡಿತು ಎಂಬ ಶ್ರುತಿವಾಕ್ಯಗಳಿಗೆ ಯುಕ್ತಿವಿರೋಧವಿರುವುದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವೆಂದು ಆಶಂಕಿಸಬಾರದು. ಮಣ್ಣು, ನೀರು ಮುಂತಾದ ಶಬ್ದಗಳು ಆಯಾಯಾ ತತ್ವಗಳ ಅಭಿಮಾನಿದೇವತೆಯನ್ನು ಹೇಳುತ್ತಿವೆ. ಆಶ್ರುತಿವಾಕ್ಯಗಳಿಗೆ ಮಣ್ಣಿನ ಅಭಿಮಾನಿ ದೇವತೆ ಮಾತನಾಡಿತು ಎಂದು ಅರ್ಥ.

ಜಗತ್ತಿಗೆ ಅಸತ್ ಕಾರಣವಲ್ಲ. ಅಸತ್ ಕಾರಣವಾಗಿರುವುದು ಎಲ್ಲಿಯೂ ಕಂಡಿಲ್ಲ.

**ಅಸಜ್ಜೀವಪ್ರಧಾನಾದಿಶಬ್ದಾ ಬ್ರಹ್ಮೈವ ನಾಪರಮ್ ।**
**ವದಂತಿ ಕಾರಣತ್ವೇನ ಕ್ವಾಪಿ ಪೂರ್ಣಗುಣೋ ಹರಿಃ ॥**

**ಭಾವಾರ್ಥ:-** ಅಸತ್, ಜೀವ, ಪ್ರಧಾನ ಇವುಗಳು ಯಾವುವೂ ಜಗತ್ ಕಾರಣವಲ್ಲ. ಆದರೆ ಇವುಗಳು ಜಗತ್ಕಾರಣವೆಂದು ಹೇಳುವ ಶ್ರುತಿಗಳಿವೆ ಎಂಬ ಶಂಕೆಯು ಬರಬಹುದು. ಅಸತ್, ಜೀವ, ಪ್ರಧಾನ ಶಬ್ದಗಳೂ ಪರಮಾತ್ಮನನ್ನೇ ಹೇಳುತ್ತಿವೆ. ಆದ್ದರಿಂದ ಪರಮಾತ್ಮನೇ ಜಗತ್ತಿನ ಕಾರಣ, ಅನಂತಗುಣಪರಿಪೂರ್ಣ.

**ಸ್ವಾತಂತ್ರ್ಯಾತ್ ಸರ್ವಕರ್ತೃತ್ವಾನ್ನಾಯುಕ್ತಂ ತದ್ವದೇಚ್ಛ್ರುತಿಃ ।**

**ಭಾವಾರ್ಥ:-** ಈ ಜಗತ್ತಿನ ಸೃಷ್ಟಿಯಾಗುವ ಪೂರ್ವದಲ್ಲಿ ಸ್ವತಂತ್ರವಾದ ಸಾಧನಗಳು ಯಾವುದೂ ಇರಲಿಲ್ಲ. ಈ ಜಗತ್ತಿನ ಸ್ವತಂತ್ರಕರ್ತೃವು ಪರಮಾತ್ಮನು ಮಾತ್ರ. ಅವನು ತನ್ನ ಇಚ್ಛೆಯಿಂದಲೇ ತನ್ನ ಅಧೀನವಾದ ಪ್ರಕೃತ್ಯಾದಿಗಳನ್ನು

ಸ್ವೀಕರಿಸಿ ಅದರಿಂದ ಜಗತ್ತನ್ನು ಸೃಜಿಸಿದನು. ಆದ್ದರಿಂದ ಶ್ರುತಿಯು ಯುಕ್ತವಾದದ್ದನ್ನೇ ಹೇಳುತ್ತಿದೆ.

**ಭ್ರಾಂತಿಮೂಲತಯಾ ಸರ್ವಸಮಯಾನಾಮಯುಕ್ತಿತಃ ।**
**ನ ತದ್ವಿರೋಧಾದ್ವಚನಂ ವೈದಿಕಂ ಶಙ್ಕ್ಯತಾಂ ವ್ರಜೇತ್ ॥**

**ಭಾವಾರ್ಥ:-** ಸಾಂಖ್ಯ, ಚಾರ್ವಾಕ, ವೈಶೇಷಿಕ, ಬೌದ್ಧ, ಆರ್ಹತ, ಶಾಕ್ತ, ಪಾಶುಪತ ಈ ದರ್ಶನಗಳ ಪ್ರವರ್ತಕರೆಲ್ಲರೂ ಅಜ್ಞಾನ, ಪ್ರಮಾದ, ವಿಪ್ರಲಿಪ್ಸಾ, ಭ್ರಾಂತಿಯುಳ್ಳವರು. ಆದ್ದರಿಂದ ಇವರು ಪ್ರತಿಪಾದಿಸಿರುವ ವಿಷಯಗಳು ಅಪ್ರಮಾಣ, ಪ್ರಮಾಣವಿರುದ್ಧವೂ ಆಗಿವೆ. ಆದ್ದರಿಂದ ಇವುಗಳ ವಿರೋಧ ವೈದಿಕ ವಚನಗಳಿಗೆ ಬರುವುದಿಲ್ಲ. ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಆಶಂಕಿಸಬಾರದು. ಶ್ರುತಿಗಳು ವಿಷ್ಣುವನ್ನು ಜಗತ್ಕಾರಣ ಎಂದಿರುವುದು ಸಮಂಜಸವೇ ಆಗಿದೆ.

**ಆಕಾಶಾದಿಸಮಸ್ತಂ ಚ ತಜ್ಜಂ ತೇನೈವ ಲೀಯತೇ ॥**

**ಭಾವಾರ್ಥ:-** ಆಕಾಶ, ವಾಯು, ತೇಜಸ್ಸು, ನೀರು, ಪೃಥಿವೀ, ಈ ಭೂತಗಳು ಹಾಗು ಭೂತಾಭಿಮಾನಿದೇವತೆಗಳು, ಪ್ರಕೃತಿ, ಜೀವ, ಕಾಲ, ಮಹತ್ತತ್ವ, ಅಹಂಕಾರತತ್ವ, ಬುದ್ಧಿ, ಮನಸ್ಸು ಇವುಗಳೆಲ್ಲವೂ ಪರಮಾತ್ಮನಿಂದ ಹುಟ್ಟಿವೆ. ಉತ್ಪತ್ತಿ ಕ್ರಮಕ್ಕೆ ವಿಪರೀತವಾಗಿ ಪರಮಾತ್ಮನಿಂದಲೇ ಲಯವನ್ನು ಹೊಂದುತ್ತವೆ.

**ಸೋಽನುತ್ಪತ್ತಿಲಯಃ ಕರ್ತಾ ಜೀವಸ್ತದ್ವಶಗಃ ಸದಾ ।**
**ತದಾಭಾಸೋ ಹರಿಃ ಸರ್ವರೂಪೇಷ್ವಪಿ ಸಮಃ ಸದಾ ॥**

**ಭಾವಾರ್ಥ:-** ಸಮಸ್ತವಸ್ತುಗಳ ಜನ್ಮ, ಲಯ ಇವುಗಳಿಗೆ ಕಾರಣನೆಂದು ಪ್ರಸ್ತುತನಾದ ಪರಮಾತ್ಮನಿಗೆ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯೂ ಇಲ್ಲ, ದೇಹತ್ಯಾಗರೂಪವಾದ ಲಯವೂ ಇಲ್ಲ. ಏಕೆಂದರೆ ಕರ್ತ ಸ್ವತಂತ್ರನಾದುದರಿಂದ. ಜೀವನು ಶ್ರೀಹರಿಯ ಅಧೀನನಾಗಿ ಉತ್ಕ್ರಾಂತಿ, ಗತಿ, ಆಗತಿಯುಳ್ಳವನಾದ್ದರಿಂದ ಅವನು ಅಣು ಎಂದು ನಿಶ್ಚಯವಾಗುತ್ತದೆ. ಜೀವನು ಈಶ್ವರನ ಅಧೀನನಾಗಿದ್ದಾನೆ. ಎಂದಿಗೂ ಅವರಿಬ್ಬರಿಗೂ ಅಭೇದವಿಲ್ಲ. ಈಶ್ವರನ ಕಿಂಚಿತ್ ಸಾದೃಶ್ಯವು ಜೀವನಿಗಿರುವುದರಿಂದ ಜೀವನನ್ನು ಈಶ್ವರನ ಅಂಶ

ಎನ್ನುತ್ತಾರೆ. ಮತ್ಸ್ಯಾದಿರೂಪಗಳು ಸ್ವರೂಪಾಂಶ. ಅವನ ರೂಪಗಳಲ್ಲಿ ಅಭೇದವೇ ಇರುವುದು. ಜೀವನು ಭಿನ್ನಾಂಶನು. ಪರಮಾತ್ಮನು ಬಿಂಬ, ಜೀವನು ಪ್ರತಿಬಿಂಬ. ಶ್ರೀಹರಿಯು ಸರ್ವಪುರುಷರಲ್ಲಿ ಸಮಾನ ಐಶ್ವರ್ಯಾದಿಗಳುಳ್ಳವನು. ಆದರೆ ಅವನ ಪ್ರತಿಬಿಂಬನಾದ ಜೀವನು ಅದೃಷ್ಟವೈಚಿತ್ರ್ಯದಿಂದ ಸುರ, ನರ ಮೊದಲಾದ ವಿಚಿತ್ರರೂಪವುಳ್ಳವನು.

**ಮುಖ್ಯಪ್ರಾಣಶ್ಚೇಂದ್ರಿಯಾಣಿ ದೇಹಶ್ಚೈವ ತದುದ್ಭವಃ ।**
**ಮುಖ್ಯಪ್ರಾಣವಶೇ ಸರ್ವಂ ಸ ವಿಷ್ಣೋರ್ವಶಗಃ ಸದಾ ॥**

**ಭಾವಾರ್ಥ:-** ಇಂದ್ರಿಯಗಳು, ಇಂದ್ರಿಯಗಣಗಳ ಅಧಿಪತಿಯಾದ ಮುಖ್ಯಪ್ರಾಣನು ವಿಷ್ಣುವಿನಿಂದಲೇ ಹುಟ್ಟಿದ್ದಾರೆ. ದೇಹಾದಿರೂಪವಾದ ನಾಮಾತ್ಮಕಪ್ರಪಂಚವೂ ವಿಷ್ಣುವಿನಿಂದಲೇ ಹುಟ್ಟಿದೆ. ಸಮಸ್ತ ಪ್ರಪಂಚವು ಮುಖ್ಯಪ್ರಾಣನ ಅಧೀನವಾಗಿದೆ. ಆ ಮುಖ್ಯಪ್ರಾಣನು ಸರ್ವದಾ ವಿಷ್ಣುವಿನ ಅಧೀನನಾಗಿರುತ್ತಾನೆ.

**ಸರ್ವದೋಷೋಜ್ಝಿತಸ್ತಸ್ಮಾದ್ ಭಗವಾನ್ ಪುರುಷೋತ್ತಮಃ ।**
**ಉಕ್ತಾ ಗುಣಾಶ್ಚಾವಿರುದ್ಧಾಸ್ತಸ್ಯ ವೇದೇನ ಸರ್ವಶಃ ॥**

**ಭಾವಾರ್ಥ:-** ಹಿಂದೆ ಹೇಳಿದಂತೆ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ಪರಮಾತ್ಮನಲ್ಲಿ ಅಜ್ಞಾನ, ಪಾರತಂತ್ರ್ಯಾದಿದೋಷಗಳಿಲ್ಲ. ಗರ್ಭವಾಸ, ಹುಟ್ಟು, ಸಾವು, ರಾಗ, ದ್ವೇಷ ಈ ಮೊದಲಾದವುಗಳಿಲ್ಲ. ಆದ್ದರಿಂದ ಶ್ರೀಹರಿಯೇ ಸರ್ವೋತ್ತಮ ದೇವತೆ. ಸಮಗ್ರ ವೇದಗಳು ಹೇಳಿರುವ ಗುಣಗಳು ಅವನಲ್ಲಿ ಸಮಂಜಸವಾಗಿವೆ. ವಿಷ್ಣುವಿನ ಆನಂದಾದಿ ಎಲ್ಲ ಗುಣಗಳೂ ಜಗತ್ಕರ್ತೃತ್ವಾದಿ ಧರ್ಮಗಳೂ ಯುಕ್ತ್ಯಾದಿ ನಾಲ್ಕುವಿಧ ವಿರೋಧಗಳಿಂದ ರಹಿತವಾಗಿದೆ.

**॥ ಇತಿ ದ್ವಿತೀಯೋಽಧ್ಯಾಯಃ ॥**

## ತೃತೀಯೋಽಧ್ಯಾಯಃ

**ಶುಭೇನ ಕರ್ಮಣಾ ಸ್ವರ್ಗಂ ನಿರಯಂ ಚ ವಿಕರ್ಮಣಾ ।**
**ಮಿಥ್ಯಾಜ್ಞಾನೇನ ಚ ತಮೋ ಜ್ಞಾನೇನೈವ ಪರಂ ಪದಮ್ ॥ ೧ ॥**

**ಯಾತಿ ತಸ್ಮಾದ್ವಿರಕ್ತಃ ಸನ್ ಜ್ಞಾನಮೇವ ಸಮಾಶ್ರಯೇತ್ ।**

**ಭಾವಾರ್ಥ:-** ಮಂಗಳಕರವಾದ ಕರ್ಮಗಳ ಆಚರಣೆಯಿಂದ ಸ್ವರ್ಗವನ್ನು ಹೊಂದುತ್ತಾರೆ. ನಿಷಿದ್ಧವಾದ ಕರ್ಮಗಳ ಆಚರಣೆಯಿಂದ ನರಕವನ್ನು ಹೊಂದುತ್ತಾರೆ. ಸ್ವರ್ಗದಿಂದ ಹಿಂತಿರುಗುವಾಗ ಕರ್ಮಶೇಷದಿಂದಲೇ ಭೂಲೋಕಕ್ಕೆ ಬರುತ್ತಾರೆ. ಆದ್ದರಿಂದ ಸಂಪೂರ್ಣ ಕರ್ಮನಾಶವಾಗಲು ಸಾಧ್ಯವಿಲ್ಲ. ಸಂಪೂರ್ಣ ಕರ್ಮನಾಶವು ಜ್ಞಾನದಿಂದ ಮಾತ್ರ ಸಾಧ್ಯ. ಆದ್ದರಿಂದ ಜ್ಞಾನಸಂಪಾದನೆಯು ಅಗತ್ಯವಾಗಿದೆ. ಮಿಥ್ಯಾಜ್ಞಾನದಿಂದ ತಮಸ್ಸು ಉಂತಾಗುತ್ತದೆ. ಮುಮುಕ್ಷುವು ಯಥಾರ್ಥಜ್ಞಾನವನ್ನು ಸಂಪಾದಿಸಬೇಕು. ಅದರಿಂದಲೇ ಮೋಕ್ಷವು ಸಾಧ್ಯ. ಕರ್ಮಾದಿಗಳಿಂದ ಉಂಟಾಗುವ ಸ್ವರ್ಗಾದಿಗಳು ಅನಿತ್ಯವಾಗಿವೆ. ಆದ್ದರಿಂದ ಸ್ವರ್ಗಾದಿಗಳು ಕಾಮ್ಯಕರ್ಮಗಳು ನರಕ ಹಾಗೂ ನಿತ್ಯತಮಸ್ಸು, ಇವುಗಳ ಸಾಧನ ಇವೆಲ್ಲದರ ಬಗ್ಗೆಯೂ ಅತಿಶಯಿತ ವೈರಾಗ್ಯವು ಅತ್ಯಾವಶ್ಯಕವಾಗಿದೆ. ವೈರಾಗ್ಯವಿದ್ದಲ್ಲಿ ಮಾತ್ರ ಉತ್ತಮವಾದ ಜ್ಞಾನಭಕ್ತಿ ಮೂಡಿ ಬಂಂದು ಮೋಕ್ಷವು ದೊರೆಯುವುದು.

**ಸರ್ವಾವಸ್ಥಾಪ್ರೇರಕಶ್ಚ ಸರ್ವರೂಪೇಷ್ವಭೇದವಾನ್ ।**
**ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ ।**
**ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್ ॥**

**ಭಾವಾರ್ಥ:-** ಎಲ್ಲ ದೇಶಕಾಲಗಳಲ್ಲಿಯೂ ಶ್ರೀಹರಿಯು ಜಾಗ್ರತ್, ಸ್ವಪ್ನ, ಸುಷುಪ್ತಿರೂಪವಾದ ಎಲ್ಲ ಅವಸ್ಥೆಗಳ ಪ್ರೇರಕನಾಗಿದ್ದಾನೆ. ಜಾಗ್ರದಾದಿ ಅವಸ್ಥಾಪ್ರೇರಕಗಳಾದ ವಿಶ್ವ, ತೈಜಸ, ಪ್ರಾಜ್ಞರೂಪಗಳಲ್ಲಿ ಅಭೇದವೇ ಇರುವುದು, ಸೃಷ್ಟಿ, ಸ್ಥಿತಿ, ಸಂಹಾರಾದಿ ಅವಸ್ಥೆಗಳ ಪ್ರೇರಕನೂ ಅವನೇ ಆಗಿದ್ದಾನೆ. ಜೀವರ ಕರ್ಮಾದಿಗಳಿಗೂ ಅವನೇ ಪ್ರೇರಕ. ದೇಶಕಾಲಗಳಲ್ಲಿ ಭೇದವಿದ್ದರೂ ಅವನ

ರೂಪಗಳಲ್ಲಿ ಭೇದವಿಲ್ಲ. ಪರಮಾತ್ಮನ ಜ್ಞಾನ, ಆನಂದ ಮೊದಲಾದ ಎಲ್ಲ ಗುಣಗಳೂ ಏಕರೂಪವಾದದ್ದು. ಅವುಗಳಲ್ಲಿ ತಾರತಮ್ಯವಿಲ್ಲ. ಅವುಗಳು ಅಲೌಕಿಕವಾಗಿವೆ. ಆದ್ದರಿಂದ ಭಕ್ತಿಯನ್ನು ಅವನಲ್ಲಿ ಮಾಡಬೇಕು. ಮುಕ್ತರ ಜ್ಞಾನಾನಂದಿಗಳಲ್ಲಿ ತಾರತಮ್ಯವಿದೆ. ಅವರ ಸಾಧನೆಯಲ್ಲಿ ತಾರತಮ್ಯ ವಿರುವುದರಿಂದ ಫಲದಲ್ಲಿ ತಾರತಮ್ಯವು ಸಮಂಜಸವಾಗಿದೆ.

**ಸಚ್ಚಿದಾನಂದ ಆತ್ಮೇತಿ ಮಾನುಷ್ಯೈಸ್ತು ಸುರೇಶ್ವರೈಃ ।**
**ಯಥಾಕ್ರಮಂ ಬಹುಗುಣೈರ್ಬ್ರಹ್ಮಣಾ ತ್ವಖಿಲೈರ್ಗುಣೈಃ ॥**

**ಉಪಾಸ್ಯಃ ಸರ್ವವೇದೈಶ್ಚ ಸರ್ವೈರಪಿ ಯಥಾಬಲಮ್ ।**
**ಜ್ಞೇಯೋ ವಿಷ್ಣುರ್ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್ ॥**

**ಭಾವಾರ್ಥ:-** ಶ್ರೀಹರಿಯು ದೋಷರಹಿತನು, ಜ್ಞಾನ ಮತ್ತು ಆನಂದಗಳ ಸ್ವರೂಪ, ಜಗತ್ತಿನ ಒಡೆಯ ಎಂದು ಈ ನಾಲ್ಕುಗುಣಗಳ ಉಪಾಸನೆಯನ್ನು ಎಲ್ಲರೂ ಮಾಡಬೇಕು. ಪ್ರಿಯಶಿರಸ್ತ್ವಾದಿಗಳ ಉಪಾಸನೆ ಎಲ್ಲರಿಗೂ ಅಲ್ಲ. ಅದನ್ನು ಹೊಂದಲು ಯೋಗ್ಯರಾದ ಅಧಿಕಾರಿಗಳಿಗೆ ಅದರ ಉಪಾಸನೆ. ಗುಣಗಳು ನಿರತಿಶವಾದುದು ಎಂಬ ಉಪಾಸನೆಯನ್ನು ಎಲ್ಲರೂ ಮಾಡಬೇಕು. ನಾಲ್ಕುಗುಣಗಳ ಉಪಾಸನೆಯೂ ಎಲ್ಲ ಅಧಿಕಾರಿಗಳಿಗೂ ಏಕಪ್ರಕಾರವಲ್ಲ. ಅವರವರ ಯೋಗ್ಯತೆಗನುಗುಣವಾಗಿರುವುದು. ಬ್ರಹ್ಮಾದಿ ದೇವತೆಗಳನ್ನು ವಿಷ್ಣುವಿನ ಪರಿವಾರದವರೆಂದು ತಿಳಿಯಬೇಕು. ವಿಷ್ಣುವನ್ನೇ ಪ್ರಧಾನವಾಗಿ ಉಪಾಸಿಸಬೇಕು.

ಬ್ರಹ್ಮದೇವರು ಸಮಸ್ತವೇದಗಳಲ್ಲಿ ಹೇಳಿದ ಎಲ್ಲ ಗುಣಗಳಿಂದಲೂ...... ಸರ್ವಗುಣಗಳ ಉಪಸಂಹಾರವನ್ನು ಯೋಗ್ಯತೆ ಇದ್ದವರು ಮಾಡಬೇಕು. ಇತರರು ತಮ್ಮ ಶಕ್ತಿ ಇದ್ದಷ್ಟು ಗುಣಗಳ ಉಪಸಂಹಾರ ಮಾಡಬೇಕು. ಸರ್ವೋತ್ತಮ ನಾದವನು ವಿಷ್ಣುಮಾತ್ರ. ಆದ್ದರಿಂದ ಅವನ ಉಪಾಸನೆಯನ್ನೇ ಮಾಡಬೇಕು. ಉಪಾಸನೆಗೆ ಜ್ಞಾನವು ಅತ್ಯವಶ್ಯಕ. ಆ ಜ್ಞಾನವನ್ನು ಶ್ರವಣ ಮನನದಿಂದ ಪಡೆಯಬೇಕು. ವೇದದಲ್ಲಿ ಹೇಳಿರುವಂತೆ ಅವನ ಗುಣಗಳನ್ನು ನಮ್ಮ

ಶಕ್ತಿಗನುಗುಣವಾಗಿ ತಿಳಿಯಬೇಕು. ಗುರೂಪದೇಶ, ಗುರುಭಕ್ತಿ, ಶಮದಮಾದಿಗಳು ಇವುಗಳಿಂದ ಅಪರೋಕ್ಷಜ್ಞಾನವಾಗುವುದು. ಭಕ್ತಿಯು ಅಪರೋಕ್ಷಜ್ಞಾನಕ್ಕೆ ಸಾಧನ. ಇತರರೂಪಗಳ ಅಪರೋಕ್ಷದಿಂದ ಮುಕ್ತಿಯು ದೊರೆಯುವುದಿಲ್ಲ. ಬಿಂಬರೂಪದ ಉಪಾಸನೆಯು ಅತ್ಯವಶ್ಯ. ಅದರಿಂದ ಮೋಕ್ಷ ಉಂಟಾಗುವುದು.

**ಸರ್ವೇಽಪಿ ಪುರುಷಾರ್ಥಾಃ ಸ್ಯುರ್ಜ್ಞಾನಾದೇವ ನ ಸಂಶಯಃ ।**
**ನ ಲಿಪ್ಯತೇ ಜ್ಞಾನವಾಂಶ್ಚ ಸರ್ವದೋಷೈರಪಿ ಕ್ವಚಿತ್ ॥ ೬ ॥**

**ಗುಣದೋಷೈಃ ಸುಖಸ್ಯಾಪಿ ವೃದ್ಧಿಹ್ರಾಸೌ ವಿಮುಕ್ತಿಗೌ ।**
**ನೃಣಾಂ ಸುರಾಣಾಂ ಮುಕ್ತೌ ತು ಸುಖಂ ಕ್ಲೃಪ್ತಂ ಯಥಾಕ್ರಮಮ್ ॥**

**ಭಾವಾರ್ಥ:-** ಮೋಕ್ಷ ಹಾಗು ಮೋಕ್ಷೇತರವಾದ ಎಲ್ಲ ಪುರುಷಾರ್ಥಗಳಿಗೂ ಜ್ಞಾನವು ಕಾರಣ. ಮನುಷ್ಯರಿಗೆ ಕರ್ಮದಿಂದ ಸ್ವರ್ಗಾದಿಪುರುಷಾರ್ಥಗಳು ದೊರೆಯುತ್ತವೆ. ಆದರೆ ಮೋಕ್ಷವು ಜ್ಞಾನದಿಂದ ಮಾತ್ರ ಲಭ್ಯ.

ಮನುಷ್ಯರಿಗೆ ಸದಸತ್ ಪ್ರವೃತ್ತಿಗಳಿಂದ ಮೋಕ್ಷದಲ್ಲಿ ಆನಂದಾದಿಗುಣಗಳ ವೃದ್ಧಿಹ್ರಾಸವುಂಟು. ದೇವತೆಗಳಿಗೆ ವೃದ್ಧಿಹ್ರಾಸಗಳಿಲ್ಲ. ತಾರತಮ್ಯಕ್ಕನುಗುಣವಾಗಿ ಆನಂದವು ಮೋಕ್ಷದಲ್ಲಿ ಕ್ಲೃಪ್ತವಾಗಿದೆ. ಮನುಷ್ಯರು ಮಾಡಿದ ಪುಣ್ಯದ ಫಲವು ತತ್ತ್ವಾಭಿಮಾನಿದೇವತೆಗಳಿಗೆ ತಾರತಮ್ಯಕ್ಕನುಗುಣವಾಗಿ ದೊರೆಯುವುದು. ಮನುಷ್ಯರಿಗೆ ಅಲ್ಪ ಮಾತ್ರ ಫಲ. ಪಾಪದ ಫಲವನ್ನು ಅಸುರರು ಭೋಗಿಸುವರು.

**॥ ಇತಿ ತೃತೀಯೋಽಧ್ಯಾಯಃ ॥**

## ಚತುರ್ಥೋಽಧ್ಯಾಯಃ

**ವಿಷ್ಣುರ್ಬ್ರಹ್ಮ ತಥಾಽಽದಾತೇತ್ಯೇವಂ ನಿತ್ಯಮುಪಾಸನಮ್ ।**
**ಕಾರ್ಯಮಾಪದ್ಯಪಿ ಬ್ರಹ್ಮ ತೇನ ಯಾಂತ್ಯಪರೋಕ್ಷತಾಮ್ ॥**

**ಭಾವಾರ್ಥ:-** ಶ್ರವಣ, ಮನನ, ನಿಧಿಧ್ಯಾಸಗಳನ್ನು ಒಮ್ಮೆ ಮಾತ್ರ

ಮಾಡುವುದಲ್ಲ, ಜ್ಞಾನರೂಪಫಲ ದೊರೆಯುವವರೆಗೂ ನಿರಂತರವಾಗಿ ಮಾಡಬೇಕು. ಪರಮಾತ್ಮನನ್ನು ಆತ್ಮಾ ಎಂದು ಉಪಾಸಿಸಬೇಕು. ಆತ್ಮಾ ಎಂದರೆ ಸ್ವಾಮಿ, ಜಗತ್ತಿನ ಒಡೆಯ ಎಂದು ಅರ್ಥ. ಪ್ರತೀಕವೇ ಬ್ರಹ್ಮವಲ್ಲ. ಪ್ರತೀಕಗಳಲ್ಲಿ ವಿಷ್ಣುವಿನ ಸನ್ನಿಧಾನ. ವಿಷ್ಣುವನ್ನು ಪ್ರತೀಕದಲ್ಲಿ ಚಿಂತಿಸಬೇಕು. ವಿಷ್ಣುವನ್ನು ಬ್ರಹ್ಮ ಎಂದು ಉಪಾಸಿಸಬೇಕು. ಬ್ರಹ್ಮ ಎಂದರೆ ಸರ್ವೋತ್ತಮ, ಗುಣಪರಿಪೂರ್ಣ ಎಂದು ಅರ್ಥ. ಚಾಂಚಲ್ಯವಿಲ್ಲದೇ ಆಸನದಲ್ಲಿ ಕುಳಿತು ಉಪಾಸನೆಯನ್ನು ಮಾಡಬೇಕು. ಇಂತಹ ಉಪಾಸನೆಯಿಂದ ಅಪರೋಕ್ಷಜ್ಞಾನವಾಗಿ ಮೋಕ್ಷವು ದೊರೆಯುವುದು.

**ಪ್ರಾರಬ್ಧಕರ್ಮಣೋಽನ್ಯಸ್ಯ ಜ್ಞಾನಾದೇವಜ್ಞಾನೇನತ್ಯಾತ್ ಪರಿಕ್ಷಯಃ ।**
**ಅನಿಷ್ಟಸ್ಯೋಭಯಸ್ಯಾಪಿ ಸರ್ವಸ್ಯಾನ್ಯಸ್ಯ ಭೋಗತಃ ॥**

ಭಾವಾರ್ಥ:- ಕರ್ಮವು ಪ್ರಾರಬ್ಧ ಮತ್ತು ಅಪ್ರಾರಬ್ಧ ಎಂದು ಎರಡು ವಿಧ. ಅನುಭವಿಸಲು ಆರಂಭವಾಗಿರುವ ಕರ್ಮದ ರಾಶಿಯನ್ನೇ ಪ್ರಾರಬ್ಧ ಎನ್ನುವರು. ಆರಂಭವಾಗದಿರುವ ರಾಶಿಯನ್ನು ಅಪ್ರಾರಬ್ಧ ಎನ್ನುವರು. ಪುಣ್ಯ-ಪಾಪ ರೂಪವಾದ ಅಪ್ರಾರಬ್ಧಕರ್ಮವು ಜ್ಞಾನದಿಂದ ನಾಶವನ್ನು ಹೊಂದುವುದು. ಪ್ರಾರಬ್ಧಕರ್ಮವು ಭೋಗದಿಂದ ನಾಶವಾಗುವುದು. ಅಪರೋಕ್ಷಜ್ಞಾನ ಬಂದ ನಂತರ ಮಾಡಿದ ಕರ್ಮಗಳ ಲೇಪವು ಉತ್ತಮಾಧಿಕಾರಿಗಳಿಗೆ ಇರುವುದಿಲ್ಲ. ಅಧಮಾಧಿಕಾರಿಗಳ ಜ್ಞಾನೋತ್ತರಕಾಲೀನವಾದ ಅಸತ್ ಪ್ರವೃತ್ತಿಯು ಮುಕ್ತಿಯಲ್ಲಿ ಆನಂದ ಹ್ರಾಸಕ್ಕೆ ಕಾರಣವಾಗಿರುವುದು, ಸತ್ ಪ್ರವೃತ್ತಿಯು ಆನಂದವೃದ್ಧಿಗೆ ಕಾರಣವಾಗುವುದು.

**ಉತ್ತರೇಷೂತ್ತರೇಷ್ವೇವ ಯಾವತ್ ವಾಯುಂ ವಿಮುಕ್ತಿಗಾಃ ।**
**ಪ್ರವಿಶ್ಯ ಭುಂಜತೇ ಭೋಗಾಂಸ್ತದಂತರ್ಬಹಿರೇವ ವಾ ॥**

ಭಾವಾರ್ಥ:- ದೇವತೆಗಳು ತಾವು ಯಾರಿಂದ ಹುಟ್ಟಿದ್ದಾರೆಯೋ ಆ ಉತ್ತಮರಾದ ದೇವತೆಗಳಲ್ಲಿ ಲಯವನ್ನು ಹೊಂದುತ್ತಾರೆ. ಚತುರ್ಮುಖ ಬ್ರಹ್ಮದೇವರವರೆಗೂ ಎಲ್ಲ ದೇವತೆಗಳಿಗೂ ಇದೇ ರೀತಿ ಲಯ. ಲಯವನ್ನು

ಹೊಂದಿದ ಅನಂತರ ಅವರಿಗೆ ಕರ್ಮ ಬಂಧನವಿಲ್ಲ. ಅವರು ಒಳಗೂ ಹೊರಗೂ ಎಲ್ಲ ಲೋಕಗಳಲ್ಲಿಯೂ ಸುಖಭೋಗವನ್ನು ಅನುಭವಿಸುತ್ತಾರೆ.

**ವಾಯುರ್ವಿಷ್ಣುಂ ಪ್ರವಿಶ್ಯೈವ ಭೋಗಾಂಶ್ಚೈವೋತ್ತರೋತ್ತರಮ್ ।**
**ಉತ್ಕ್ರಮ್ಯ ಮಾನುಷಾ ಮುಕ್ತಿಂ ಯಾಂತಿ ದೇಹಕ್ಷಯಾತ್ ಸುರಾಃ ॥**

**ಭಾವಾರ್ಥ:-** ಚತುರ್ಮುಖಬ್ರಹ್ಮದೇವರು ವಿಷ್ಣುವಿನಲ್ಲಿ ಲಯವನ್ನು ಹೊಂದಿ ಮುಕ್ತಿಯನ್ನು ಹೊಂದುವರು. ಪ್ರಕೃತಿಯಲ್ಲಿ ಅವರಿಗೆ ಲಯವಿಲ್ಲ ಎಂದು 'ಏವ' ಶಬ್ದದಿಂದ ತಿಳಿಸಿರುವರು. ವಿಷ್ಣುವಿನಲ್ಲಿ ಲಯವನ್ನು ಹೊಂದಿದ ಬ್ರಹ್ಮದೇವರು. ಒಳಹೊರಗೂ ಭೋಗವನ್ನು ಅನುಭವಿಸುವರು. ಎಲ್ಲ ದೇವತೆಗಳು ವಾಯುದೇವರ ಪರ್ಯಂತವಾಗಿ ತಮಗಿಂತ ಉತ್ತಮರಲ್ಲಿ ಲಯವನ್ನು ಹೊಂದಿ ಅನಂತರ ಲಿಂಗದೇಹಭಂಗವವನ್ನು ಹೊಂದಿ ಮುಕ್ತಿಯನ್ನು ಪಡೆಯುವರು. ಮುಕ್ತಿಯಲ್ಲಿ ಎಲ್ಲರ ಭೋಗವೂ ತರತಮಭಾವದಿಂದ ಕೂಡಿರುವುದು. ಅಪರೋಕ್ಷಜ್ಞಾನವನ್ನು ಪಡೆದಿರುವ ಜೀವರ ಹೃದಯಾಗ್ರವು ಉತ್ಕ್ರಮಣಕಾಲದಲ್ಲಿ ಬೆಳಗುವುದು. ಆ ಜೀವರ ಬ್ರಹ್ಮನಾಡಿಯ ದ್ವಾರಾ ದೇಹವನ್ನು ಪರಿತ್ಯಜಿಸುತ್ತಾರೆ. ಉತ್ಕ್ರಮಣಕಾಲದಲ್ಲಿ ಮಾರ್ಗದ ಸ್ಮರಣೆಯು ಉಂಟಾಗುವುದು. ಹೀಗೆ ಉತ್ಕ್ರಮಣವನ್ನು ಹೊಂದಿದ ಜೀವರು ಮುಕ್ತಿಯನ್ನು ಹೊಂದುವರು.

**ಅರ್ಚಿರಾದಿಪಥಾ ವಾಯುಂ ಪ್ರಾಪ್ಯ ತೇನ ಜನಾರ್ದನಮ್ ।**
**ಯಾಂತ್ಯುತ್ತಮಾ ನರೋಚ್ಚಾದ್ಯಾ ಬ್ರಹ್ಮಲೋಕಾತ್ ಸಹಾಮುನಾ ॥**

**ಭಾವಾರ್ಥ:-** ಉತ್‌ಕ್ರಮಣವನ್ನು ಹೊಂದಿದ ಮನುಷ್ಯೋತ್ತಮರೇ ಮುಂತಾದವರು ಅರ್ಚಿರಾದಿಮಾರ್ಗದಿಂದ ವಾಯುಲೋಕವನ್ನು ಕುರಿತು ಹೋಗಿ ಅನಂತರ ಬ್ರಹ್ಮದೇವರ ಜೊತೆಗೆ ಪರಮಾತ್ಮನನ್ನು ಹೊಂದುವರು.

ಪ್ರತೀಕಾಲಂಬನರು, ಅಪ್ರತೀಕಾಲಂಬನರು ಎಂದು ಎರಡು ವಿಧ. ದೇವತೆಗಳು, ಗಂಧರ್ವರು ಅಪ್ರತೀಕಾಲಂಬನರು. ಉಳಿದ ಮನುಷ್ಯೋತ್ತಮರು, ಋಷಿಗಂಧರ್ವರು ಇವರೆಲ್ಲರೂ ಪ್ರತೀಕಾಲಂಬನರು. ಅಪ್ರತೀಕಾಲಂಬನರು ಅರ್ಚಿರಾದಿಮಾರ್ಗದಿಂದ ವಾಯುದೇವರನ್ನು ಹೊಂದಿ ಅನಂತರ ಪರಬ್ರಹ್ಮನನ್ನು

ಹೊಂದಿ ಕಾರ್ಯಬ್ರಹ್ಮ ಸಮೀಪದಲ್ಲಿ ನೆಲೆಸುವರು. ಪ್ರತೀಕಾಲಂಬನರು ವಾಯುಲೋಕವನ್ನು ಕುರಿತು ತೆರಳಿ ವಾಯುದೇವರೊಂದಿಗೆ ಕಾರ್ಯಬ್ರಹ್ಮನನ್ನು ಹೊಂದಿ ಅಲ್ಲಿಯೇ ನೆಲಸುವರು. ಅಲ್ಲಿ ಬ್ರಹ್ಮದೇವರಿಂದ ಉಪದೇಶವನ್ನು ಪಡೆದು ಅವರೊಂದಿಗೆ ವಾಸುದೇವನನ್ನು ಹೊಂದುವರು.

**ಯಥಾಸಂಕಲ್ಪಭೋಗಾಶ್ಚ ಚಿದಾನಂದಶರೀರಿಣಃ ।**
**ಜಗತ್ಸೃಷ್ಟ್ಯಾದಿವಿಷಯೇ ಮಹಾಸಾಮರ್ಥ್ಯಮಪ್ಯೃತೇ ।**
**ಯಥೇಷ್ಟಶಕ್ತಿಮಂತಶ್ಚ ವಿನಾ ಸ್ವಾಭಾವಿಕೋತ್ತಮಾನ್ ॥**

**ಭಾವಾರ್ಥ:-** ಮುಕ್ತರು ಪರಮಾತ್ಮನ ಇಚ್ಛೆಯ ಅಧೀನರಾಗಿ ಯಥೇಷ್ಟಭೋಗವನ್ನು ಭೋಗಿಸುವರು. ಸಾಯುಜ್ಯಮೋಕ್ಷವನ್ನು ಹೊಂದುವ ಅಧಿಕಾರಿಗಳು ಪರಮಾತ್ಮನಿಂದ ಭುಕ್ತವಾದ ಭೋಗವನ್ನು ಭೋಗಿಸುವರು. ಮುಕ್ತರು ಜ್ಞಾನಾನಂದರೂಪವಾದ ಶರೀರವನ್ನು ಹೊಂದಿರುತ್ತಾರೆ. ಕೇವಲ ಸಂಕಲ್ಪಮಾತ್ರದಿಂದಲೇ ಭೋಗವು ಮುಕ್ತರಿಗೆ ದೊರೆಯುವುದು. ಜಗತ್ತಿನ ಸೃಷ್ಟ್ಯಾದಿಗಳವಿಷಯದಲ್ಲಿ ಮುಕ್ತನಿಗೂ ಅಧಿಕಾರವಿಲ್ಲ. ತಮ್ಮ ಯೋಗ್ಯತೆಯನ್ನು ಮೀರಿದ ಅಧಿಕ ಆನಂದಾದಿಗಳು ಅವರಿಗಿಲ್ಲ.

**ಅನನ್ಯವಶಗಾಶ್ಚೈವ ವೃದ್ಧಿಹ್ರಾಸವಿವರ್ಜಿತಾಃ ।**
**ದುಃಖಾದಿರಹಿತಾ ನಿತ್ಯಂ ಮೋದಂತೇಽವಿರತಂ ಸುಖಮ್ ॥**

**ಭಾವಾರ್ಥ:-** ಮುಕ್ತರು ತಮಗಿಂತ ಚಿಕ್ಕವರು ಅಥವಾ ಸಮಾನರ ಅಧೀನರಾಗಿರುವುದಿಲ್ಲ. ತಮಗಿಂತ ಉತ್ತಮರ ಅಧೀನರಾಗಿರುತ್ತಾರೆ. ಮುಕ್ತರಿಗೆ ದುಃಖ, ಚಿಂತೆ, ಶ್ರಮ, ಆಲಸ್ಯಾದಿದೋಷಗಳಿರುವುದಿಲ್ಲ. ಅವರ ಭೋಗವು ಉತ್ಸಾಹಸಾಧ್ಯವಾದದ್ದಲ್ಲ. ಅವರ ಭೋಗಕ್ಕೆ ಪ್ರಯತ್ನದ ಅಗತ್ಯವಿಲ್ಲ. ಆದ್ದರಿಂದ ಆನಂದದ ವೃದ್ಧಿಹ್ರಾಸಗಳಿಲ್ಲ. ತೇಜೋರೂಪವಾದ ಬಾಹ್ಯದೇಹದಿಂದಲೂ ಹಾಗೂ ಚಿತ್-ಶರೀರದಿಂದಲೂ ಮುಕ್ತರು ಭೋಗಿಸುತ್ತಾರೆ. ಅವರ ಭೋಗಕ್ಕೆ ವಿರತಿ ಇಲ್ಲ. ನಿರಂತರವಾಗಿ ಭೋಗವನ್ನು ಭೋಗಿಸುತ್ತಾರೆ. ಎಂದಿಗೂ ಸಂಸಾರಕ್ಕೆ ಮತ್ತೆ ಹಿಂತಿರುಗುವುದಿಲ್ಲ.

**ಪೂರ್ಣಪ್ರಜ್ಞೇನ ಮುನಿನಾ ಸರ್ವಶಾಸ್ತ್ರಾರ್ಥಸಂಗ್ರಃ ।**
**ಕೃತೋಽಯಂ ಪ್ರೀಯತಾಂ ತೇನ ಪರಮಾತ್ಮಾ ರಮಾಪತಿಃ ॥**

ಭಾವಾರ್ಥ:- ಪರಿಪೂರ್ಣಜ್ಞಾನವುಳ್ಳ ಮುನಿಗಳು ಮಧ್ವಾಚಾರ್ಯರು. ಬ್ರಹ್ಮಮೀಮಾಂಸಾಶಾಸ್ತ್ರದ ಸಂಗ್ರಹರೂಪವಾದ ಈ ಕೃತಿಯು ಅವರಿಂದ ರಚಿತವಾಗಿರುವುದು. ಈ ಕೃತಿಯಿಂದ ರಮಾಪತಿಯು ಸಂತುಷ್ಟನಾಗಲಿ.

**ನಮೋನಮೋಽಶೇಷದೋಷದೂರ ಪೂರ್ಣಗುಣಾತ್ಮನೇ ।**
**ವಿರಿಂಚಿಶರ್ವಪೂರ್ವೇಡ್ಯವಂದ್ಯಾಯ ಶ್ರೀವರಾಯ ತೇ ॥**

ಭಾವಾರ್ಥ:- ಸಮಸ್ತದೋಷಗಳಿಂದ ರಹಿತನು, ಅನಂತಗುಣ ಪರಿಪೂರ್ಣನು ಆಗಿರುವನು ಪರಮಾತ್ಮನು. ಚತುರ್ಮುಖಬ್ರಹ್ಮದೇವರೇ ಮೊದಲಾದವರಿಂದ ವಂದ್ಯನಾಗಿರುವನು. ಆ ಪರಮತ್ಮನಿಗೆ ಭಕ್ತಿಶ್ರದ್ಧಾಪೂರ್ವಕ ವಾದ ಅನಂತ ನಮನಗಳು.

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ಬ್ರಹ್ಮಸೂತ್ರಾಣುಭಾಷ್ಯೇ ಚತುರ್ಥೋಽಧ್ಯಾಯಃ ॥**

# ಸರ್ವಮೂಲಗ್ರಂಥಗಳು

ಶ್ರೀ ಮಧ್ವಾಚಾರ್ಯರು ವಿರಚಿಸಿದ ಮೂವತ್ತೇಳು ಗ್ರಂಥಗಳು ಸರ್ವಮೂಲಗ್ರಂಥಗಳೆಂದು ಪ್ರಸಿದ್ಧವಾಗಿವೆ. ಇವುಗಳನ್ನು೧. ಗೀತಾಪ್ರಸ್ಥಾನ ೨. ಉಪನಿಷತ್ಪ್ರಸ್ಥಾನ ೩. ಸೂತ್ರಪ್ರಸ್ಥಾನ ೪. ಋಕ್‌ಪ್ರಸ್ಥಾನ ೫. ಇತಿಹಾಸ ಪುರಾಣಗಳು ೬. ದಶಪ್ರಕರಣಗಳು ೭. ತಂತ್ರಸಾರ ಮತ್ತು ಸ್ತೋತ್ರ ಪೂಜಾದಿಗಳು ಎಂದು ವಿಂಗಡಿಸಲಾಗುವುದು.

ತತ್ವಜ್ಞಾನ ಧರ್ಮ ಮತ್ತು ಭಾರತೀಯ ಸಂಸ್ಕೃತಿಯ ಸಮಗ್ರಸಾರವೇ ಇವುಗಳಲ್ಲಿ ಅಡಕವಾಗಿರುವುದು. ಈ ಸಾರವನ್ನು ಕನ್ನಡದಲ್ಲಿ ಒದಗಿಸಲು ಶ್ರೀ ಪೇಜಾವರ ಮಠಾಧೀಶ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಮಾರ್ಗದರ್ಶನದಲ್ಲಿ ಸರ್ವಮೂಲಗ್ರಂಥಗಳ ಕನ್ನಡ ಅನುವಾದದ ಯೋಜನೆಯನ್ನು ಕೈಕೊಳ್ಳಲಾಗಿದೆ.